# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೮ ಸಂಚಿಕೆ : ೨ ಜುಲೈ-ಡಿಸೆಂಬರ್ ೨೦೧೪




ಸಂಪಾದಕರು

**ಪ್ರೊ॥ ಜಿ. ಅಬ್ದುಲ್ ಬಷೀರ್**

**ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ**

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಕಲಾಭವನ (ರಿ.)

೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು - ೧೯, ದೂರವಾಣಿ : ೨೬೬೧ ೫೮೭೭



# ಕರ್ನಾಟಕ
# ಲೋಚನ
## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೮ ಸಂಚಿಕೆ : ೦೨ ಜುಲೈ-ಡಿಸೆಂಬರ್ ೨೦೧೪

ಸಂಪಾದಕರು
ಪ್ರೊ|| ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ-ಮೇಲ್ : bmsritrust@gmail.com

**KARNATAKA LOCHANA** - (Half yearly Research Journal)
Editor : Prof. **G. Abdul Basheer**. Published by **B.M.Sri. Smaraka Prathistana, M.V.Si. P.G. Research Center, B.M.Sri. Kalabhavan(R),** 3rd Main Road, Narasimharaja Colony, Bangalore - 560 019. Ph.No. 080-26615877, 26676773 Pages: 148

Year : July - December 2014 (Vol. 28 , No. 2),

Yearly Subscription : **Rs. 100/-** (for Libraries)

For Individual : **Rs. 50/-**

ವಾರ್ಷಿಕ ಚಂದಾ : ರೂ. ೧೦೦/- (ಗ್ರಂಥಾಲಯಗಳಿಗೆ)

ವ್ಯಕ್ತಿಗಳಿಗೆ : ರೂ. ೫೦/-

ಕರ್ನಾಟಕ ಲೋಚನದ ಆಜೀವ ಚಂದಾ : ರೂ. ೫೦೦/-

ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೧೦೦೦/-



ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

## ಮುಂಮಾತು

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ. ಕನ್ನಡ ನಾಡಿನ ಅನೇಕ ವಿಶ್ವವಿದ್ಯಾನಿಲಯಗಳಂತಹ ಉನ್ನತ ಅಧ್ಯಯನ ಕೇಂದ್ರಗಳು ನಡೆಸಿಕೊಂಡು ಬರುತ್ತಿದ್ದ ಸಂಶೋಧನೆಗೆ ಮೀಸಲಾದ ನಿಯತಕಾಲಿಕೆಗಳಲ್ಲಿ ಅನೇಕವು ಈಗಾಗಲೇ ನಿಂತುಹೋಗಿವೆ. ಹಾಗಾಗದೆ ಇದನ್ನು ಆದಷ್ಟೂ ನಿಗದಿತ ವೇಳೆಗೆ ಹೊರತರುವ ಉದ್ದೇಶ ಪ್ರತಿಷ್ಠಾನದ್ದು. ಆದರೆ ದಿನೇ ದಿನೇ ಗುಣಮಟ್ಟದ ಲೇಖನಗಳ ಕೊರತೆ ಎದ್ದು ಕಾಣುತ್ತಿದೆ; ಹೀಗಾಗಿ ಮೈದುಂಬಿಕೊಂಡು ಪತ್ರಿಕೆ ಬರಲು ಅಡ್ಡಿಯೇ ಎನ್ನಬಹುದು. ಪತ್ರಿಕೆಯ ಮುದ್ರಣವ್ಯವಸ್ಥೆಗೆ ವಿಳಂಬವೇನಾಗದು, ಆದರೆ ಕೆಲವು ವೇಳೆ ಸಾಕಷ್ಟು ಲೇಖನಗಳು ಕೈಸೇರದೆ ಪತ್ರಿಕೆ ತಡವಾಗಿ ಹೊರಬರುವುದು ಅನಿವಾರ್ಯವಾಗಿಬಿಡುತ್ತದೆ. ಅನೇಕ ಸಂದರ್ಭಗಳಲ್ಲಿ ಲೇಖಕರನ್ನು ಕೇಳಿಕೊಂಡು ಲೇಖನಗಳನ್ನು ಬರೆಯಿಸುವ ಶ್ರಮವನ್ನೂ ಪತ್ರಿಕೆಯ ಸಂಪಾದಕರು ವಹಿಸಿಕೊಳ್ಳಬೇಕಾಗುತ್ತದೆ. ಇದನ್ನು ಯಶಸ್ವಿಯಾಗಿ ಮಾಡಿಕೊಂಡು ಬರುತ್ತಿರುವ **'ಕರ್ನಾಟಕ ಲೋಚನ'**ದ ಸಂಪಾದಕರಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಹಿಸುವ ಶ್ರದ್ಧೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಷ್ಠಾನದ ಕಾರ್ಯದರ್ಶಿಗಳಲ್ಲೊಬ್ಬರಾದ ಅವರು ಆಯೋಜಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವಿದ್ವಾಂಸರ ದುಂಬಾಲುಬಿದ್ದು ಆದಷ್ಟೂ ಕಾಲಕ್ಕೆ ಸರಿಯಾಗಿ ಪತ್ರಿಕೆ ಹೊರಬರುವಂತೆ ಅವರು ನೋಡಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಅವರ ಬಗ್ಗೆ ಪ್ರತಿಷ್ಠಾನಕ್ಕೆ ವಿಶೇಷ ಮೆಚ್ಚಿಕೆ. ಆಸಕ್ತರು ಈ ಸಂಚಿಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂಬುದು ನನ್ನ ನಂಬಿಕೆ.

**–ಡಾ॥ ಪಿ. ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

## ಸಂಪಾದಕೀಯ

'ಕರ್ನಾಟಕ ಲೋಚನ'–ಸಂಪುಟ ೨೮, ಸಂಚಿಕೆ ೦೨, ಜುಲೈ–ಡಿಸೆಂಬರ್ ೨೦೧೧ಳ ಸಹೃದಯರ ಕೈಗೆ ತಡವಾಗಿ ತಲುಪಲು ಲೇಖನಗಳ ಕೊರತೆಯೇ ಮುಖ್ಯ ಕಾರಣವಾಗಿದೆ. ಲೇಖಕ ಮಿತ್ರರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಸಂಶೋಧನ ಲೇಖನಗಳನ್ನು ಕಳುಹಿಸಿಕೊಡುವ ಕೃಪೆ ಮಾಡಬೇಕೆಂದು ಕೋರುತ್ತೇನೆ. ಈ ಸಂಚಿಕೆಯುಲ್ಲಿ ಪ್ರಕಟವಾಗುತ್ತಿರುವ ಲೇಖನಗಳು ವೈವಿಧ್ಯಮುಯುವೂ ವೈಶಿಷ್ಟ್ಯಪೂರ್ಣವೂ ಆಗಿವೆ; ಮೌಲಿಕ ವಿಚಾರ ಗಳನ್ನೊಳಗೊಂಡಿವೆ. ಭಾಷೆ, ಸಂಸ್ಕೃತಿ, ಸಂಶೋಧನೆ, ವಿಮರ್ಶೆ, ತೌಲನಿಕ ವಿಚಾರಗಳನ್ನೊಳಗೊಂಡ ಲೇಖನಗಳಲ್ಲಿ ನವೀನ ಆಲೋಚನೆಗಳಿವೆ; ಚರ್ಚೆಗೆ ಕಾರಣವಾಗಬಹುದಾದ ಅನೇಕ ವಿಚಾರಗಳಿವೆ. ಉದಾ : ಶಾಸನತಜ್ಞ ಸೀತಾರಾ ಮಜಾಗೀರ್‌ದಾರ್ ಅವರ ದೇವಪುರದ ಮಹಾಕವಿಲಕ್ಷ್ಮೀಶ, ಡಾ ಜಿ.ಆರ್. ತಿಪ್ಪೇಸ್ವಾಮಿಯವರ 'ಹರಿಹರನ ರಗಳೆಗಳು: ಬದಲಾದಮೌಲ್ಯಗಳು', ಡಾ. ಎನ್.ಆರ್.ಲಲಿತಾಂಬ ಅವರ ಚಿಕದೇವರಾಜವಡೆಯರ ಕಾಲ–ಹೊಸ ಆಸ್ಥಾನ ಕಾವ್ಯ', ಡಾ.ಸುರೇಶ್ ನಾಗಲಮಡಿಕೆಯವರ 'ಮುಮ್ಮಡಿಯ ಕಾಲ–ಆಧುನಿಕತೆಯ ಹೊಳಹು' ಎಂಬಿವೇ ಮುಂತಾದ ಲೇಖನಗಳನ್ನು ಗಮನಿಸಬಹುದು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಿಚಾರಗೋಷ್ಠಿಗಳಲ್ಲಿ, ದತ್ತಿ ಕಾರ್ಯಕ್ರಮಗಳಲ್ಲಿ, ಉಪನ್ಯಾಸ ಲೇಖನ ಮಾಲೆಗಳಲ್ಲಿ ಸಾಹಿತಿಮಿತ್ರರು ಮಂಡಿಸಿದ ಪ್ರಬಂಧಗಳನ್ನು ನೀಡಿದ ಉಪನ್ಯಾಸಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಲೇಖಕಮಿತ್ರರಿಗೆ ಹಾಗೂ ಉಳಿದ ಲೇಖನಗಳನ್ನು ಕಳುಹಿಸಿದ ಲೇಖಕಮಿತ್ರರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರೂ ಕರ್ನಾಟಕ ಲೋಚನದ ಮಾಜಿಸಂಪಾದಕರೂ ಖ್ಯಾತ ಲೇಖಕರೂ

ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಆದ ಡಾ.ನ.ಸುಬ್ರಹ್ಮಣ್ಯ ಅವರು ದಿನಾಂಕ: ೦೬-೦೯-೨೦೧೪ ರಂದು ನಿದನರಾದರು. ಕರ್ನಾಟಕ ಲೋಚನ ಶ್ರೀಯುತರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

೨೦೧೪ನೆಯ ಸಾಲಿನ 'ಶ್ರೀ ಸಾಹಿತ್ಯ ಪ್ರಶಸ್ತಿಗೆ' ಭಾಜನರಾದ ಕನ್ನಡದ ಹೆಸರಾಂತ ಸಂಶೋಧಕರೂ ಗ್ರಂಥ ಸಂಪಾದನಾಕಾರರೂ ಆದ ಶ್ರೀ ಬಿ.ಎಸ್. ಸಣ್ಣಯ್ಯನವರಿಗೆ 'ಕರ್ನಾಟಕ ಲೋಚನ' ಅಭಿನಂದನೆಗಳನ್ನು ಸಲ್ಲಿಸುತ್ತದೆ.

'ಕರ್ನಾಟಕ ಲೋಚನ'ದ ಪ್ರಕಟಣೆಗೆ ಸಹಕರಿಸುತ್ತಿರುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯನವರಿಗೂ ಅಧ್ಯಕ್ಷರಾದ ಡಾ॥ ಪಿ. ವಿ. ನಾರಾಯಣ ಅವರಿಗೂ ಮತ್ತೋರ್ವ ಗೌ॥ ಕಾರ್ಯದರ್ಶಿಗಳಾದ ಶ್ರೀ ಬಿ. ಆರ್. ರವೀಂದ್ರನಾಥ್ ಅವರಿಗೂ ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರಿಗೂ ಕಛೇರಿ ಸಿಬ್ಬಂದಿ ವರ್ಗದವರಿಗೂ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

-ಪ್ರೊ॥ ಜಿ. ಅಬ್ದುಲ್ ಬಷೀರ್
ಸಂಪಾದಕರು

**ಪರಿವಿಡಿ**

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೧. ಸಿರಿಗನ್ನಡಂ ಗೆಲ್ಗೆ ಮತ್ತು ಕರುನಾಡಿನ ಮೂಲ

–ಡಾ॥ ಎಂ. ಚಿದಾನಂದ ಮೂರ್ತಿ*

ಕನ್ನಡಿಗರ ಹೆಮ್ಮೆಯ ಘೋಷಣೆ "ಸಿರಿಗನ್ನಡಂ ಗೆಲ್ಗೆ" ಎಂದು ಎಲ್ಲರೂ, ಮತ್ತು ತಮ್ಮ ನಾಡು "ಕರುನಾಡು" ಎಂದು ಹೇಳಿಕೊಳ್ಳಲು ಕೆಲವರು ಹೆಮ್ಮೆ ಪಡುತ್ತಾರೆ. ಅವುಗಳ ಮೂಲ ಏನು ಎಂಬುದನ್ನು ಸ್ಪಷ್ಟಪಡಿಸುವುದು ಈ ಕಿರುಲೇಖನದ ಉದ್ದೇಶ.

ನಾನೂ ಸೇರಿದಂತೆ ಬಹುತೇಕರು ಅಂದುಕೊಂಡಿದ್ದಂತೆ "ಸಿರಿಗನ್ನಡಂ ಗೆಲ್ಗೆ" ಘೋಷಣೆಯ ಕರ್ತೃ ಖಂಡಿತ ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು ಅಲ್ಲ; ರಾ.ಹ.ದೇಶಪಾಂಡೆ (ರಾಮಚಂದ್ರ ಹಣಮಂತ ದೇಶಪಾಂಡೆ ೧೮೬೧–೧೯೩೧) ಅವರೇ ೧೮೯೦ರಲ್ಲಿ ಕನ್ನಡದ ಅಭಿಮಾನವನ್ನು ಉತ್ತರಕರ್ನಾಟಕದಲ್ಲಿ ಬೆಳೆಸಿದ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ ಬೆಳೆಸಿದವರು. ಅವರ ಬಗೆಗಿನ ಈ ಲೇಖನದಲ್ಲಿ ಉಲ್ಲೇಖಿಸಿರುವ ದಾಖಲೆಗಳನ್ನು ಒದಗಿಸಿರುವವರು, ಅವರ ಮೊಮ್ಮಗ ಈಚೆಗೆ ಕರ್ನಾಟಕ ವಿ.ವಿ.ದಿಂದ ಗೌರವ ಡಾಕ್ಟೊರೇಟ್ ಪದವಿ ಪಡೆದ ಭಾರತದ ಶ್ರೇಷ್ಠ ಗ್ರಂಥಪಾಲಕರಲ್ಲಿ ಒಬ್ಬರಾದ ತೊಂಬತ್ತು ವರ್ಷದ ಡಾ. ಕೆ.ಎಸ್. ದೇಶಪಾಂಡೆ. (ಅವರು ಬೆಂಗಳೂರು ವಿ.ವಿ.ದ ಗ್ರಂಥ ಪಾಲಕರಾಗಿದ್ದಾಗ ನಾನು ಕನ್ನಡ ರೀಡರ್ ಆಗಿದ್ದು).

ರಾ.ಹ. ದೇಶಪಾಂಡೆಯವರು ೧೩.೭.೧೮೯೦ ರಂದು ಕರ್ನಾಟಕ ವಿದ್ಯಾವರ್ಧಕ ಸಂಘದ ಸದಸ್ಯರಿಗೆ ಕಳುಹಿಸಿರುವ ಅಚ್ಚಾದ ಮನವಿ ಪತ್ರದಲ್ಲಿ ಈ ವಾಕ್ಯವಿದೆ – "ತಮ್ಮ ಸಹಾಯದಿಂದ ಕರ್ನಾಟಕ ವಿದ್ಯಾವರ್ಧಕ ಸಂಘದ ಕೆಲಸವು ಈ ಹೊತ್ತಿನ ತನಕ ನಡೆದು ೩೦೦೦ ರುಪಾಯಿಯ ಅಂಕೆಗಳು ಬಿದ್ದಿರುತ್ತವೆ"– ಎಂದು ಹೇಳಿ ೨೦.೭.೧೮೯೦ರಂದು ನಡೆಯಲಿರುವ ಸಭೆ ವಿಷಯ ತಿಳಿಸಲಾಗಿದೆ. ಕೆಳಗೆ "ತಮ್ಮ ಸೇವಕ ರಾ.ಹ ದೇಶಪಾಂಡೆ" ಎಂದು ಅಚ್ಚಾಗಿದ್ದರೆ ಮೇಲೆ "ಕನ್ನಡ ಬೆಳೆಯಲಿ" ಎಂದು ಅಚ್ಚಾಗಿದೆ. ಅದೇ ರಾ.ಹ. ದೇಶಪಾಂಡೆಯವರು ಸಂಘದ ಸದಸ್ಯರಿಗೆ

* ಸಂಶೋಧಕರು, 'ಮಿಂಚು' # ೯/ಎ, ೪ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು – ೫೬೦೦೪೦. ದೂ: ೦೮೦–೨೩೩೦೦೬೮೭

ಕಾರ್ಯದರ್ಶಿಯಾಗಿ ೩೧.೧೦.೧೮೯೩ ರಂದು ಕಳುಹಿಸಿರುವ ಅಚ್ಚಾದ ಮನವಿ ಪತ್ರದ ಮೇಲೆ "ಸಿರಿಗನ್ನಡಂ ಗೆಲ್ಗೆ" ಎಂದೇ ಅಚ್ಚಾಗಿದೆ. (ನೋಡಿ-ಆಹ್ವಾನ ಪತ್ರ). ಎಂದರೆ "ಸಿರಿಗನ್ನಡಂ ಗೆಲ್ಗೆ" ಘೋಷಣೆಯು ಅವರಿಗೆ ಹೊಳೆದು ಧಾರವಾಡದ ಜನರಿಗೆ ಗೊತ್ತಾದುದು ೧೮೯೩ರ ಅಕ್ಟೋಬರಿನಲ್ಲಿ. ಈ ಅರ್ಥಪೂರ್ಣ, ಹಳಗನ್ನಡ ಭಾಷೆಯ ಘೋಷಣೆಯು ಮುಂದೆ ಜನಪ್ರಿಯವಾಗಿ ಕನ್ನಡಿಗರ ಮನಸ್ಸು ಗೆದ್ದು ಎಲ್ಲೆಡೆ ಪ್ರಚಾರಗೊಂಡಿತು. ಕರ್ನಾಟಕ ರಾಜ್ಯದ ಉದಯದ ಮುನ್ನ ಮತ್ತು ಆಮೇಲೂ ಅದು ಕನ್ನಡಿಗರ ಸ್ಫೂರ್ತಿಯನ್ನು ಹೆಚ್ಚಿಸಿದೆ. ಅದು ಎಲ್ಲ ದೃಷ್ಟಿಗಳಿಂದ ಬಂಕಿಮ ಚಂದ್ರಚಟರ್ಜಿಯವರ "ವಂದೇ ಮಾತರಂ" ಘೋಷಣೆಯನ್ನು ಹೋಲುತ್ತದೆ.

ರಾಮಚಂದ್ರ ಹಣಮಂತ ದೇಶಪಾಂಡೆಯವರೇ "ಸಿರಿಗನ್ನಡಂ ಗೆಲ್ಗೆ" ಘೋಷಣೆಯ ಮೂಲ ಪ್ರವರ್ತಕರು ಎಂಬುದನ್ನು ಮುದವೀಡು ಕೃಷ್ಣರಾಯರು ೧೬.೪.೧೯೪೦ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನೀಡಿದ ಭಾಷಣದಲ್ಲಿ ದೃಢೀಕರಿಸಿದ್ದಾರೆ. ಆ ದಿನ ಸಂಘದಲ್ಲಿ ರಾ.ಹ.ದೇ. ಅವರ ಭಾವಚಿತ್ರ ಅನಾವರಣಗೊಳಿಸಲಾಯ್ತು. ಆ ದಿನ ಆಚಾರ್ಯ ಬಿ.ಎಂ. ಶ್ರೀಯವರು ಆ ಸಮಾರಂಭದಲ್ಲಿ ಹಾಜರಿದ್ದರು. ಇದು ೧೭.೪.೧೯೪೦ರ ಸಂಯುಕ್ತ ಕರ್ನಾಟಕದಲ್ಲಿ ವರದಿಯಾಗಿದೆ. "ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಎಂಬ ಹುಯಿಲಗೋಳ ನಾರಾಯಣರಾಯರ ಕವಿತೆಯ ಪ್ರಾರ್ಥನೆಯ ಬಳಿಕ ಬಿ.ಎಂ. ಶ್ರೀಯವರ ಭಾಷಣಕ್ಕಿಂತ ಮುನ್ನ ಮುದವೀಡು ಕೃಷ್ಣರಾಯರ ಭಾಷಣದ ವರದಿಯಿದು:

"ದಿ. ದೇಶಪಾಂಡೆಯವರ ಉತ್ಕಟ ಕನ್ನಡಾಭಿಮಾನವನ್ನು ಬಣ್ಣಿಸುತ್ತ ಈ ಭಾಗದ ಕನ್ನಡಿಗರಲ್ಲಿ ಎಂ.ಎ. ಪಾಸಾದವರಲ್ಲಿ ಮೊತ್ತ ಮೊದಲಿಗರೆಂದೂ ಮಹಾರಾಷ್ಟ್ರ ಮೋಹದಿಂದ ಮೈಮರೆತ ಧಾರವಾಡವನ್ನು ಎಚ್ಚರಿಸಿ ಕಾರ್ಯತತ್ಪರರನ್ನಾಗಿ ಮಾಡಿದ, 'ಸಿರಿಗನ್ನಡಂ ಗೆಲ್ಗೆ' ಎಂಬ ಸಪ್ತಾಕ್ಷರಿ ಮಂತ್ರದ ಮೂಲ ದ್ರಷ್ಟಾರರೆಂದೂ ಅವರು ಬಿತ್ತಿದ ಬೀಜ ಇಂದು ಮೊಳೆತು, ಹೂತು, ಕಾತು ಏಕೀಕೃತ ಕರ್ನಾಟಕವೆಂಬ ಅಮೃತ ಫಲವನ್ನು ಕೊಡುವಂತಾಗಿದೆಯೆಂದೂ ಹೇಳಿದರು." (ಏಕೀಕೃತ ಕರ್ನಾಟಕವು ಮುಂದೆ ೧೯೫೬ರಲ್ಲಿ ರೂಪುಗೊಂಡಿತು).

ರಾ.ಹ. ದೇಶಪಾಂಡೆಯವರ "ಸಿರಿಗನ್ನಡಂ ಗೆಲ್ಗೆ" ಉಕ್ತಿಯ ಹಳಗನ್ನಡ ಭಾಷೆಯು ಕನ್ನಡದ ಪ್ರಾಚೀನತೆಯನ್ನು 'ಸಿರಿ'ಯು ಕನ್ನಡದ ಸಂಪತ್ತನ್ನು, "ಗೆಲ್ಗೆ" ಎಂಬುದು ಕನ್ನಡದ ಉಜ್ವಲ ಭವಿಷ್ಯವನ್ನು ಧ್ವನಿಸುತ್ತದೆ. "ವಂದೇಮಾತರಂ" ಮಂತ್ರದ್ರಷ್ಟಾರ ಬಂಕಿಂ ಚಂದ್ರಚಟರ್ಜಿಯವರಷ್ಟೇ ಕನ್ನಡಿಗರಿಗೆ ರಾ. ಹ.ದೇ. ಗೌರವ ಸ್ಮರಣಾರ್ಹರು.

"ಕರುನಾಡು": "ಕರ್ನಾಟ" ಅಥವಾ "ಕರ್ನಾಟಕ" ಕನ್ನಡ ಭಾಷೆಯನ್ನಾಡುವ ಜನರ ಪ್ರದೇಶ ಎಂಬರ್ಥದಲ್ಲಿ ಕ್ರಿಸ್ತ ಪೂರ್ವ ಸಂಸ್ಕೃತ ಮಹಾಭಾರತದಲ್ಲಿಯೇ ಬಳಕೆಯಾಗಿದೆ. ಆ ಹೆಸರು ಒಂದು ನಾಡಾಗಿ ಶೂದ್ರಕ, ವರಾಹಮಿಹಿರ, ಸೋಮದೇವ ಇತ್ಯಾದಿ ಸಂಸ್ಕೃತ ಕೃತಿಕಾರರ ಕೃತಿಗಳಲ್ಲಿ ಮಾತ್ರವಲ್ಲದೆ ಕರ್ನಾಟಕದ ಹಿಂದಿನ ನೂರಾರು ಕಾವ್ಯ, ಶಾಸನಗಳಲ್ಲಿ ಉಲ್ಲೇಖವಾಗಿದೆ. ಅದೇ ಅರ್ಥದಲ್ಲಿ "ಕನ್ನಡನಾಡು" ಎಂಬ

ಪದವೂ ಬಳಕೆಯಾಗಿದೆ. (ಉದಾ: ಕವಿರಾಜಮಾರ್ಗದ 'ನಾಡದಾ ಕನ್ನಡದೊಳ್'). ಒಂದಂತೂ ಸ್ಪಷ್ಟ- 'ಕರ್ನಾಟ' ಅಥವಾ 'ಕರ್ಣಾಕಟ'ವು ದೇಶವಾಚಿ, 'ಕನ್ನಡವು ಆ ದೇಶದ ಭಾಷಾವಾಚಿ. ಸಾಮಾನ್ಯವಾಗಿ ದೇಶವಾಚಿ ಪದ ಮೊದಲು, ಭಾಷಾವಾಚಿ ಆದ ಆಮೇಲಿನದು. (ಇದಕ್ಕೆ ವಿನಾಯ್ತಿ ಇವೆ, ವಿರಳವಾಗಿ). ಉದಾಹರಣೆಗೆ, ಫ್ರಾನ್ಸ್-ಫ್ರೆಂಚ್, ಗ್ರೀಸ್-ಗ್ರೀಕ್, ಮಹಾರಾಷ್ಟ್ರ-ಮರಾಠಿ, ಬಂಗಾಳ-ಬಂಗಾಳಿ, ಹಾಗೆಯೇ ಕರ್ನಾಟ(ಕ)-ಕನ್ನಡ. "ಕರ್ನಾಟ" ಭೂಪ್ರದೇಶದ ಜನ ಆಡುವ ಭಾಷೆಯೇ "ಕನ್ನಡ" ಎಂಬುದು ಸ್ಪಷ್ಟ. ಎಂದರೆ, "ಕರ್ನಾಟ" ಎಂಬುದೇ ಸರಳಗೊಂಡು, ಭಿನ್ನವ್ಯಂಜನಗಳ ದ್ವಿತ್ವವು ಏಕವ್ಯಂಜನ ದ್ವಿತ್ವವಾಗಿ, ಪದ ಮಧ್ಯದ -ಟ-ವು-ಡ- ಆಗಿ "ಕನ್ನಡ" ಆಗಿದೆ. ಈ ಊಹೆ ಬಹುತೇಕ ನಿಲ್ಲತಕ್ಕದ್ದು. "ಕರ್ನಾಟ" ಕ್ಕೆ ನಾವು ಏನೇ ನಿಷ್ಪತ್ತಿ ಹೇಳಲಿ- ಅದರ ರೂಪಾಂತರವೇ "ಕನ್ನಡ". "ಕರ್ನಾಟಕ" ನಾಡಿನ ಭಾಷೆಯೇ "ಕನ್ನಡ". (ಕರ್ನಾಟ-ಕನ್ನಡ).



ಆದರೆ. "ಕರುನಾಡು" ಹಲವರು ಭಾವಿಸಿರುವಂತೆ ದೇಶವಾಚಿ ಯಾವ ಪ್ರತ್ಯೇಕ ಪದ ಅಲ್ಲ. ಕನ್ನಡ ನಿಘಂಟು "ಕರುನಾಡು" ಪದವನ್ನು ಕನ್ನಡನಾಡು ಎಂಬುದಕ್ಕೆ ಸಮಾನವಾಗಿಕೊಟ್ಟು, ಎತ್ತರವಾದ ಪ್ರದೇಶ ಎಂಬರ್ಥ ನೀಡಿರುವುದು ಖಂಡಿತ ಸರಿ ಅಲ್ಲ. "ಕರ್ನಾಟ" ಪದದಂತೆ "ಕರುನಾಡು" ಪದಕ್ಕೆ ಪ್ರಾಚೀನ ಪ್ರಯೋಗಗಳೇ ಇಲ್ಲ. ತಮಿಳಿನ ಕ್ರಿ.ಶ. ೨-೩ನೇ ಶತಮಾನದ ಶಿಲಪ್ಪದಿಗಾರಂ ಕೃತಿಯಲ್ಲಿ "ಕರುನಾಡರ್" (ಕರುನಾಡಿನವರು, ಕನ್ನಡಿಗರು), ಪಾಂಡ್ಯದೊರೆ ಪರಾಂತಕನ ಸು. ೭೭೦ರ ತಮಿಳು ಶಾಸನದಲ್ಲಿ "ಕರುನಾಡಗನ್" (ಕರುನಾಡಿನವನು, ಕನ್ನಡಿಗ) ಎಂಬ ಪ್ರಯೋಗಗಳಿವೆ. ಎಂದರೆ "ಕರ್ನಾಟ" ಎಂಬ ಕನ್ನಡಪದ ತಮಿಳಿನ ಉಚ್ಚಾರಕ್ಕನುಗುಣವಾಗಿ "ಕರುನಾಡ" ಎಂದು ರೂಪಾಂತರಗೊಂಡಿದೆ. ತಮಿಳಿನಲ್ಲಿ ಪದಮಧ್ಯದ "ಟ"ವು "ಡ" ಆಗುತ್ತದೆ. "ಕರ್ನಾಟಕರ್" ಎಂಬುದು ತಮಿಳಿನಲ್ಲಿ "ಕರುನಾಡರ್" ಆಗಿದೆ. ಆಂಗ್ಲರ ಉಚ್ಚಾರದಲ್ಲಿ 'ಕನ್ನಡ'ವು "ಕೆನರ" ಆದಂತೆ (South Canara = ದಕ್ಷಿಣ ಕನ್ನಡ). "ಕೆನರ" ಪದದಂತೆ "ಕರುನಾಡು" ಪದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. "ಕರುನಾಡು" ಎಂದರೆ ಎತ್ತರಪ್ರದೇಶ ಎಂಬರ್ಥ ಕೊಡುವುದು ಸಂಪೂರ್ಣ ಕಲ್ಪಿತ. "ಸಿರಿಗನ್ನಡಂ ಗೆಲ್ಗೆ" ಎಂಬ ಘೋಷಣೆಯ ಬಗ್ಗೆ ಕನ್ನಡಿಗರು ಹೆಮ್ಮೆಪಟ್ಟುಕೊಳ್ಳುವುದು ಸರಿ; ಆದರೆ ಕರ್ನಾಟಕವನ್ನು "ಕರುನಾಡು" ಎಂದು ಕರೆಯಲು ಯಾವ ಹೆಮ್ಮೆಯ ಕಾರಣವೂ ಇಲ್ಲ. ■

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೨. ದೇವಪುರದ ಮಹಾಕವಿ ಲಕ್ಷ್ಮೀಶ

–ಶಾಸನ ಶಾಸ್ತ್ರ ವಿಶಾರದ ಸೀತಾರಾಮ ಜಾಗೀರ್‌ದಾರ್*

## I

ಕನ್ನಡ ಸಾಹಿತ್ಯ ಚರಿತ್ರೆಯನ್ನು ನಿರೂಪಿಸುವಾಗ್ಗೆ ಆಗಲಿ ಅಥವಾ ಬೇರೆ ಯಾವುದೇ ಭಾರತೀಯ ಭಾಷೆಯ ಚರಿತ್ರೆ ಅಥವಾ ದೇಶದ ಪ್ರಾಚೀನ ಕವಿಗಳ ನಿರೂಪಣಾ ಪದ್ಧತಿಯನ್ನು ಅನುಸರಿಸಿ ಮೊದಲು ಮಹತ್ವವನ್ನು ಆಯಾ ಕವಿಗಳ ಕೃತಿಗಳಿಗೆ ಕೊಡುತ್ತಾರೆ. ಇದೊಂದು ಸಾರ್ವಕಾಲಿಕ – ಸಾರ್ವತ್ರಿಕ –ಅಳತೆಯ ಮಾನದಂಡ. ಉದಾಹರಣೆಗೆ ಸಮಸ್ಯೆ ಇಲ್ಲದ ರನ್ನನ ಚರಿತ್ರೆಯನ್ನು ನೋಡೋಣ. ಆತ ತನ್ನ ಕೃತಿ 'ಅಜಿತ ಪುರಾಣಂ' ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ:

> ಅಱಿಕೆಯ ಗಟ್ಟಗೆಯುಂ ಪೆ
> ದ್ದೊರ್ಱೆಯುಂ ಪರಿವಲ್ಲಿ ತದ್ದವಾಡಿಗೆ ತೆಂಕಲ್
> ತೊಱೆಗಲೆಗೆ ಬಡಗಲಿರ್ದುದು
> ನೆಱೆಯೆ ಸುಖೋದ್ದೀಪಮೆನಿಸಿ ಬೆಳುಗಲಿದೇಶಂ ॥
> ಬೆಳಗಲಿಯಯ್ನೂಱರೊಳ
> ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ
> ತಿಳಕಮೆನೆ ನೆಗಱ್ದ ಮುದುವೊಳ
> ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ॥[೧]

ಈ ಪದ್ಯಗಳಲ್ಲಿ ರನ್ನನ ಸ್ಥಳದ ಬಗೆಗೆ ಮತ್ತು ಜೀವನಚರಿತ್ರೆಗೆ ಸಂಬಂಧಿಸಿದ ಕೆಲವು ವಿವರಗಳಿವೆ; ಇವನ್ನು ಎಲ್ಲ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಆ ಸಂಗತಿಗಳೆಂದರೆ:

ಘಟಪ್ರಭಾ (ಗಟ್ಟಗೆ) ಮತ್ತು ಪೆರ್ದೊರೆ (=ಕೃಷ್ಣಾ) ನದಿಗಳು ಹರಿಯುವಲ್ಲಿ ತದ್ದವಾಡಿಗೆ ದಕ್ಷಿಣಕ್ಕೂ ತೊರಗಲೆಗೆ ಉತ್ತರಕ್ಕೂ ಬೆಳುಗಲಿ ದೇಶವಿದೆ. ಈ ಬೆಳುಗಲಿ

* ಸಂಶೋಧಕರು, # ೪೦೬/ಬಿ, I'ಕಲ್ಪ' ೩ನೆಯ ಮುಖ್ಯರಸ್ತೆ, ೭ನೆಯ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು–೫೭೦ ೦೦೯. ಮೊ: ೦೮೨೧–೨೨೫೪೬೨೬೩

೫೦೦ರಲ್ಲಿ (೫೦೦ ಗ್ರಾಮಗಳ ಮಂಡಲದಲ್ಲಿ) ಜಂಬುಖಂಡಿ ಪ್ರಾಂತವಿದೆ. ಇದಕ್ಕೆ ತಿಲಕ ಪ್ರಾಯವಾಗಿದೆ. ಪ್ರಸಿದ್ಧವಾದ 'ಮುದುವೊಳಲ್' ಊರು (>ಮುಧೋಳಪಟ್ಟಣ); ಇದರಲ್ಲಿ ಹುಟ್ಟಿ ಕವಿರತ್ನನು ಸುಪುತ್ರನೆನಿಸಿದ.[೨]

ಈ ಪದ್ಯಗಳಿಂದ ರನ್ನನ ಜನ್ಮಸ್ಥಳ 'ಮುದುವೊಳಲ್' (ಮುಧೋಳ) ಎಂಬುದು ನಿಶ್ಚಿತ. ಅದು ಘಟಪ್ರಭಾ ಹಾಗೂ ಕೃಷ್ಣಾನದಿಗಳ ಮಧ್ಯದ ಪ್ರದೇಶದಲ್ಲಿದೆ. ಇದೇ ಮಾನದಂಡವನ್ನು ಮಹಾಕವಿ ಲಕ್ಷ್ಮೀಶನಿಗೂ ಬಳಸಲಿ; ಆವಾಗ ಸತ್ಯ ತಂತಾನೆ ಪ್ರಕಟವಾಗುತ್ತದೆ.

ಕವಿಲಕ್ಷ್ಮೀಶ ತನ್ನ ಕಾವ್ಯದಲ್ಲಿ ಹೀಗೆ ಹೇಳಿದ್ದಾನೆ:

(೧) ಶ್ರೀವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ ।
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ (ಬೆಳ್ದಿಂಗಳಂ)[೩] ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮೆಮಗೀಯಲಿ[೪] ॥
(ಸಂಧಿ : ೧–೧)

(೨) ಛಂದಸ್ಸುಲಕ್ಷಣಮಲಂಕಾರ ಭಾವರಸ
ಮೊಂದಿ ಕಲೆವೆತ್ತ ಸತ್ಕೃತಿ ಚಮತ್ಕೃತಿಯುಕ್ತಿ
ಯೊಂದುಮಿಲ್ಲದ ಕಾವ್ಯಮಶ್ರಾವ್ಯಮಹುದೆಂದರಿಯದೆ ಕವಿತೆಯನು ಬರಿದೆ।
ದಂದುಗಕ್ಕೊಳಗಾಗಿ ಪೇಳ್ದೆನೆಂದೆನ್ನ ನಗು
ವಂದಮಂ ಮಾಡದೆನಗೊಲಿದಿತ್ತನಮಲಮತಿ
ಯಂ ದೇವಪುರದ ಲಕ್ಷ್ಮೀರಮಣನೆಂದರಿದು ಕೇಳ್ವುದೆಲ್ಲಾ ಸುಜನರು ॥
(ಸಂಧಿ : ೧–೬)

(೩) ವಿದ್ವತ್ಸಭಾವಲಯಮರಿಯೆ ವಿರಚಿಸಿದಂ ಭ
ರದ್ವಾಜಗೋತ್ರಭವನಣ್ಣಮಾಂಕನ ಸುತಂ
ಸದ್ವಿನುತ ಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು
ಹೃದ್ವನಜದೊಳ್ ದೇವಪುರದ ಲಕ್ಷ್ಮೀಶನಪ
ದದ್ವಯವನಾವಗಂ ಧ್ಯಾನಿಸುವರಡಿಗಳಂ
ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿಭಾರತದ ಕಥೆಯನು ॥
(ಸಂಧಿ : ೧–೧೧)

ಮೇಲಿನ ಎರಡು ಪದ್ಯಗಳಲ್ಲಿ 'ದೇವಪುರದ' ಎಂಬುದನ್ನು 'ದೇವನೂರ' ಎಂದು ಹೇಳಿದರೆ ಛಂದಸ್ಸಿಗೆ ಕಿಂಚಿತ್ತೂ ಊಣೆ–ನ್ಯೂನತೆ–ಉಂಟಾಗುವುದಿಲ್ಲ.

(a) .... [ಅ]ಮಲ ಮತಿ
ಯಂ ದೇವ । ನೂರ ಲ । ಕ್ಷ್ಮೀ ರಮಣ । ನೆಂದರಿದು ।
ಕೇಳ್ವುದೆ। ಲ್ಲಾ ಸುಜನ । ರು ॥

(b) ಹೃದ್ವನಜ । ಮೊಳ್‌ದೇವ । ನೂರಲ । ಕ್ಷ್ಮೀಶನ ಪ ।
ದದ್ವಯವನಾವಗಂ ....

ಕೇಳುವ ಸುಜನರಿಗೆ ಕವಿ ಹೇಳಿರುವುಗು 'ದೇವಪುರದ' ಲಕ್ಷ್ಮೀಶನ ಪದದ್ವಯ. ಅವನ ಮನಸ್ಸಿನಲ್ಲಿ ಇದ್ದುದನ್ನು ತನ್ನ ಊರನ್ನು –ಇದ್ದ ಹಾಗೆ ಇದ್ದಂತೆ ಈ ಪೀಠಿಕಾ ಭಾಗದಲ್ಲಿ ಹೇಳಿದ್ದಾನೆ; ಇದು ಗಮನಾರ್ಹ[೫]. ಛಂದಸ್ಸಿಗಾಗಿ ಎಂದು ಕೆಲವರು ಹೇಳುತ್ತಾರೆ. ಛಂದಸ್ಸೆ ಕೆಡದಿರುವಾಗ ಅವನು ಹೀಗೇಕೆ ಮಾಡುತ್ತಿದ್ದ. ಕಾಮಾಲೆ ಕಣ್ಣಿನವರಿಗೆ ಅವರ ದೃಷ್ಟಿಯಂತೆ ತೋರುತ್ತದೆ. ಆದರೆ ಕವಿಯು ಹೇಳಿರುವುದು ದೇವಪುರ.

(೪) ಕಾವ್ಯ ಕೃತಿಯ ಮುಕ್ತಾಯದಲ್ಲಿ ಒಂದು ಪದ್ಯ ಹೀಗಿದೆ:

ತೊಳಗುವ ಸುವರ್ಣಭೂಷಣದಿಂದೆ ಸೇರಿಸಿದ
ಲಲಿತ ಮುಕ್ತಾಭರಣದಿಂದೆ ಮಿಗೆ ರಂಜಿಸುವ
ಪಲವಲಂಕಾರಂಗಳಿಡಿದ ಚೆಲ್ವಿನ ದೇವಪುರದ ಲಕ್ಷ್ಮೀಕಾಂತನ
ವಿಲಸಿತದ ಕೃತಿಲಲನೆ ಮೃದುಪದವಿಲಾಸದಿಂ
ಸಲೆ ಸೊಗಸಲಡಿಗಡಿಗೆ ನಡೆಯಲ್ಕೆ ಚಿತ್ತಂಗ
ಳೊಲಿದೆರಗದಿರ್ದಪುವೆ ಧರೆಯೊಳಗೆ ರಸಿಕರಾಗಿರ್ದ ಭಾವಕನಿಕರದ ॥[೬]

(ಸಂಧಿ : ೩೪–೪೪)

ಕವಿ ಲಕ್ಷ್ಮೀಶನು ತನ್ನ ಆರಾಧ್ಯ ದೇವತೆಯ ಸ್ಥಳವನ್ನು ಯಾವುದು ಕವಿಯ ಸ್ಥಳವೂ ಆಗಿದೆಯೆಂದು ನಂಬಲಾಗುತ್ತಿದೆಯೊ ಆ ಸಂಗತಿಯ ದತ್ತಾಂಶಗಳ ಸಂಗ್ರಹ (Data collection) ಮಾಡೋಣ. ಆ ವಿವಿರ ಇಂತಿದೆ:

| ಕ್ರಮಸಂಖ್ಯೆ | ಸ್ಥಳದ ಹೆಸರು | ಸಂಧಿ | ಪದ್ಯಸಂಖ್ಯೆ |
|---|---|---|---|
| ೧ | ದೇವಪುರ | ೧ | ೧ |
| ೨ | ದೇವಪುರ | ೧ | ೬ |
| ೩ | ದೇವಪುರ | ೧ | ೧೧ |
| ೪ | ದೇವಪುರ | ೨ | ೬೭ |
| ೫ | ದೇವಪುರ | ೩ | ೪೨ |
| ೬ | ದೇವಪುರ | ೪ | ೭೨ |
| ೭ | ದೇವಪುರ | ೫ | ೭೩ |
| ೮ | ದೇವಪುರ | ೭ | ೬೭ |
| ೯ | ದೇವಪುರ | ೮ | ೪೯ |
| ೧೦ | ದೇವಪುರ | ೧೧ | ೪೧ |
| ೧೧ | ದೇವಪುರ | ೧೨ | ೫೧ |
| ೧೨ | ದೇವಪುರ | ೧೩ | ೬೪ |
| ೧೩ | ದೇವಪುರ | ೧೪ | ೩೩ |
| ೧೪ | ದೇವಪುರ | ೧೬ | ೪೬ |

| | | | |
|---|---|---|---|
| ೧೫ | ದೇವಪುರ | ೧೭ | ೬೦ |
| ೧೬ | ದೇವಪುರ | ೨೦ | ೬೨ |
| ೧೭ | ದೇವಪುರ | ೨೧ | ೬೭ |
| ೧೮ | ದೇವಪುರ | ೨೨ | ೪೭ |
| ೧೯ | ದೇವಪುರ | ೨೩ | ೬೪ |
| ೨೦ | ದೇವಪುರ | ೨೪ | ೮೨ |
| ೨೧ | ದೇವಪುರ | ೨೫ | ೬೨ |
| ೨೨ | ದೇವಪುರ | ೨೬ | ೭೭ |
| ೨೩ | ದೇವಪುರ | ೨೯ | ೪೯ |
| ೨೪ | ದೇವಪುರ | ೩೦ | ೫೪ |
| ೨೫ | ದೇವಪುರ | ೩೩ | ೫೩ |
| ೨೬ | ದೇವಪುರ | ೩೪ | ೩೯ |
| ೨೭ | ದೇವಪುರ | ೩೪ | ೪೨ |
| ೨೮ | ದೇವಪುರ | ೩೪ | ೪೪ |
| ೧ | ಸುರಪುರ | ೬ | ೫೫ |
| ೨ | ಸುರಪುರ | ೯ | ೩೪ |
| ೩ | ಸುರಪುರ | ೨೮ | ೬೩ |
| ೪ | ಸುರಪುರ | ೩೪ | ೪೧ |
| ೧ | ದಿವಿಜಪುರ | ೧೦ | ೫೪ |
| ೧ | ಅನಿಮಿಷನಗರ | ೧೫ | ೫೦ |
| ೧ | ದೇವಗ್ರಾಮ | ೧೮ | ೬೪ |
| ೧ | ದೇವ ನಗರಿ | ೧೯ | ೫೫ |
| ೨ | ದೇವ ನಗರಿ | ೩೨ | ೫೭ |
| ೧ | ಅಮರನಗರಿ | ೨೭ | ೫೬ |
| ೧ | ಸುರನಗರ | ೩೧ | ೭೯ |
| ೧ | ಅಮರಪುರ | ೩೪ | ೪೦ |

ಇಡೀ ಕಾವ್ಯದಲ್ಲಿ ಒಟ್ಟು : ೨೮ + ೪ + ೧ + ೧ + ೧ + ೨+ ೧ + ೧ + ೧ = ೪೦ ಬಾರಿ ತನ್ನ ಆರಾಧ್ಯ ದೇವತೆಯ ಸ್ಥಳವನ್ನು ಹೇಳಿದ್ದಾನೆ; ಇದರಲ್ಲಿ ೨೮ ಸಲ 'ದೇವಪುರ' ಎಂದು ದಾಖಲಿಸಿದ್ದಾನೆ ಮತ್ತು ೧೨ ಸಲ ಪರ್ಯಾಯ ಶಬ್ದಗಳನ್ನು ಬಳಸಿದ್ದಾನೆ. 'ದೇವನೂರು' ಎಂಬುದನ್ನು ಒಮ್ಮೆಯೂ ಹೇಳಿಲ್ಲ. ಕವಿಯು ಹೇಳದ 'ದೇವನೂರ' ಹೆಸರನ್ನು[೭] –ಇಲ್ಲದುದನ್ನು – ಏಕೆ ಹೇಳಬೇಕು? ಇದ್ದುದನ್ನು ಏಕೆ ಕೈ ಬಿಡಬೇಕು; ಬಿಡಬಾರದು. ಆದುದರಿಂದ ಕವಿ ಲಕ್ಷ್ಮೀಶನು ತನ್ನ ಕೃತಿಯಲ್ಲಿ ಹೇಳಿದುದನ್ನು ಹೇಳೋಣ; ಅದು ದೇವಪುರ.

ಕವಿಯು ತನ್ನ ಆರಾಧ್ಯ ದೇವರು 'ದೇವಪುರ ನಿಲಯ ಲಕ್ಷ್ಮೀಗಮಣ' ಮತ್ತು 'ದೇವ ಪುರದ ಲಕ್ಷ್ಮೀಕಾಂತ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಗ್ರಂಥದಲ್ಲಿ ಒಮ್ಮೆಯೂ ಹೇಳದ ದೇವನೂರಿಗೂ ಕವಿಗೂ ಏನೂ ಸಂಬಂಧ ಇಲ್ಲವೆನ್ನುವುದು ಸ್ಫಟಿಕ ಶಲಾಕೆಯಷ್ಟು (crystal clear )ಸ್ಪಷ್ಟವಿದೆ. ಈ ಸ್ಥಳ ಎಲ್ಲಿ ಇದ್ದಿತೆಂಬುದನ್ನು ಗುರತಿಸಬೇಕು. ಇದಕ್ಕೆ ಕಾವ್ಯದಲ್ಲಿ ಸಹಾಕವಾಗಿರುವ ಭೌಗೋಲಿಕ ಅಂಶಗಳು ಏನಾದರೂ ಇವೆಯೆಂದು ನೋಡಬೇಕು. ಪರಿಸರ ಕವಿ ಕೃತಿಯಲ್ಲಿ ತಿಳಿದೊ ತಿಳಿಯದೆಯೊ ಪ್ರತಿಫಲಿಸಿ ನಿಂತಿರುತ್ತದೆ. ಕವಿ ಪರಿಸರದ ಕೂಸು; ಸಾಹಿತ್ಯ ಸಮಾಜದ ಚಿತ್ರ ನೀಡುವ ಕೈಗನ್ನಡಿ. ದೇವಪುರ ಸುರಪುರ ತಾಲೂಕಿನಲ್ಲಿಯೆ ಎರಡು ಇದ್ದು ಯಾವುದು ಎಂದು ನನಗೆ ಕೇಳಿದುದು ಉಂಟು. ಸುರಪುರ ಹಾಗೂ ತಿಂಥಣಿ ಮಧ್ಯೆ ಇರುವ ದೇವಪುರ ಎಂಬುದನ್ನು ಕಾವ್ಯದಲ್ಲಿ ಬಂದ ಪೆರ್ದೊರೆ (ಕೃಷ್ಣಾನದಿ) ನಿರ್ಣಯಿಸಿಕೊಡುತ್ತದೆ.

> ಎಲ್ಲಿಯುಂ ಪರಿವ ಪೆರ್ದೊರೆಯಿಂದೆ ಕೆರೆಯಿಂದೆ
> ಯೆಲ್ಲಿಯುಂ ಕುಸುಮದಾಗರದಿಂದೆ ಸರದಿಂದೆ
> ಯೆಲ್ಲಿಯುಂ ರತ್ನಮಯದಿಳೆಯಿಂದೆ ಬೆಳೆಯಿಂದೆ ಮಣಿಕೃತಕ ಶೈಲದಿಂದೆ
> ಎಲ್ಲಿಯುಂ ಸುಳಿವ ಗೋವ್ರಜದಿಂದೆ ಗಜದಿಂದೆ
> ಯೆಲ್ಲಿಯುಂ ಕತ್ತುರಿಯ ಮೃಗದಿಂದೆ ಖಗದಿಂದೆ
> ಯೆಲ್ಲಿಯುಂ ವಿರಚಿತಭವನದಿಂದೆ ಜನದಿಂದೆಯಾ ನಾಡಸಿರಿ ಮೆರೆದುದು॥
>
> (ಕ.ಜೈ.ಭಾ.ಸಂ. ೩-೨)

ಮೂಲಕೃತಿ ಸಂಸ್ಕೃತ ಜೈಮಿನಿಭಾರತದಲ್ಲಿ 'ಪೆರ್ದೊರೆ' ಇದರ ಪ್ರಸ್ತಾಪವೇ ಇಲ್ಲ. ಕೇವಲ 'ಸರಸೀ' ಎಂದು ಸರೋವರವನ್ನು ಹೇಳಿದೆ:

> ಸಂಪೂರ್ಣ ಸರಸೀಯುಕ್ತಾಂ ಭೂಷಿತಾಂ ನಗರೀಂ ಶುಭಾಮ್
> ಯೂಪೈರ್ನಲಭ್ಯತೇಮಾರ್ಗೋಹೋಮಧೂಮೈರ್ನದೃಶ್ಯತೇ ॥[೮]
>
> (ಸಂ. ಜೈ. ಭಾ. ಅಧ್ಯಾಯ ೩-೪೪)

ಭೀಮಸೇನನು ಹಸ್ತಿನಾವತಿಯನ್ನು ಬಿಟ್ಟು ಭದ್ರಾವತಿಗೆ ಬಂದಿದ್ದಾನೆ. ಯೌವನಾಶ್ವನ ಆ ನಗರ ಯೂಪಸ್ತಂಭಗಳಿಂದ ಹಾಗೂ ಯಜ್ಞದ ಹೊಗೆಯಿಂದ ತುಂಬಿದೆ. ಅಲ್ಲಲ್ಲಿ ಸರಸಿಗಳಿಂದ ಎಂದರೆ ತಾವರೆಗಳಿಂದ ತುಂಬಿದ ಕಾಸಾರಗಳಿಂದ ಕೂಡಿದೆ. ಆದರೆ ಕನ್ನಡದ ಕವಿಗೆ ಅಂತಿಲ್ಲ-

ಆ ನಾಡು, ಎಲ್ಲಿಯುಂ ಪರಿವ-ಹರಿಯುವ-ಪೆರ್ದೊರೆಯಿಂದ ಎಂದರೆ ಕೃಷ್ಣಾ ನದಿಯ ಕಾರಣದಿಂದ ಸಿರಿಸಂಪತ್ತಿನಿಂದ ಕೂಡಿತ್ತು. ಸಗರ ನಾಡಿನಲ್ಲಿ ಎಂದರೆ ಸುಮಾರು ಮುದ್ದೇಬಿಹಾಳ ತಾಲೂಕಾದಿಂದ ಹಿಡಿದು ಸುರಪುರ, ಶಹಪುರ, ಯಾತಗಿರಿ ಇತ್ಯಾದಿ ನದಿಯ ಈ ಕಡೆಗೆ ಮತ್ತು ಲಿಂಗಸೂಗೂರು ತಾಲೂಕಾದಿಂದ ಮಾನ್ವಿ ತಾಲೂಕಾದವರೆಗೆ ನದಿಯ ಆ ಕಡೆಗೆ ಹಬ್ಬಿದ ಭೂಭಾಗದ ಮಧ್ಯದಲ್ಲಿ ಕೃಷ್ಣಾನದಿಯು ಹರಿದಿದೆ. ಅದು ಅಂದೂ ಅಲ್ಲಿಯೆ ಇತ್ತು-ಇಂದೂ ಅಲ್ಲಿಯೆ ಇದೆ. ಈಗಲೂ ಆಗೀಗ ಬೇಸಿಗೆಯಲ್ಲಿ

ಆ ಊರ ದನಕರುಗಳು ನದಿಗೆ ನೀರು ಕುಡಿಯಲು ಹೋಗುತ್ತವೆ. ನದಿಯು ದೇವಪುರಕ್ಕೆ ಕೇವಲ ೫ ಮೈಲುಗಳ ಅಂತರದಲ್ಲಿದೆ. ಆ ಊರ ಸುತ್ತಮುತ್ತ ಅಡಕೆಯ ಹಾಗೂ ತೆಂಗಿನ ತೋಟಗಳು ಇದ್ದವು ಎನ್ನುವುದಕ್ಕೆ ಸುರಪುರದ ಮುಜಮ್‌ದಾರರ ತೋಟಗದ್ದೆಗಳೇ ಸಾಕ್ಷಿ. ಕಾಲಕಾಲಕ್ಕೆ ಮಾನವನ ದಾಹಕ್ಕೆ ಪರಿಸರ ಧೂಳಿಪಟವಾಗಿದೆ. ಅಂತೆಯೇ ಈಗ ಬಯಲು ಭೂಮಿಯೆ ಹೆಚ್ಚು ಕಾಣಿಸುತ್ತದೆ. ಮುದನೂರಿನಿಂದ ಕೃಷ್ಣಾನದಿಗೆ ಕೂಡುವ ದೊಡ್ಡಹಳ್ಳ ಯಾವುದು ಮುದನೂರಿನ ರಾಮತೀರ್ಥ ಹಾಗೂ ಲಕ್ಷ್ಮಣತೀರ್ಥ ಮತ್ತು ಅಗ್ನಿಯ ಬಳಿಯ ಅಗ್ರತೀರ್ಥ ವಜ್ಜಲ ಚೆನ್ನೂರು, ಹಾಗೂ ಕಲ್ದೇವನಹಳ್ಳಿ, ಹಿರಿಯ ಹೆಬ್ಬಾಳ (ನಾರಾಯಣ ದೇವಾಲಯ ಶಾಸನ) ಕುರುಬತಳ್ಳಳ್ಳಿ ಮತ್ತು ಕಚಕನೂರು, ಹಾವಿನಾಳ, ಆಲ್ದಾಳ ಇತ್ಯಾದಿ ಗ್ರಾಮಗಳ ಜಿತಾನೀರಿನ ಮಹಾನ್‌ಸೆಲೆಗಳನ್ನು ಹೊಂದಿದ ದೊಡ್ಡಹಳ್ಳದ ಎಡಬಲದ ಭೂಮಿ ಇಂದಿಗೂ ಭತ್ತ ಕಬ್ಬು ಇತ್ಯಾದಿ ನೀರಾವರಿ ಬೆಳೆ ಬೆಳೆಯುವ (ತರಿ ಭೂಮಿ ಇದೆ) ಭೂಮಿ ಇರುವುದನ್ನು ಯಾರಾದರೂ ನೋಡಬಹುದು. ಕವಿಯ ವರ್ಣನೆಯಲ್ಲಿ ಇದೇ ನಿಸರ್ಗ ಬಂದಿದೆ.[೯]

ಭದ್ರಾವತಿ ಹೆಸರನ್ನು ಹಿಡಿದು ಕೆಲವರು ಈಗಿನ ಭದ್ರಾವತಿಗೆ ತಳಕು ಹಾಕಿದ್ದಾರೆ. ವಾಸ್ತವದಲ್ಲಿ ಈ ಊರಿಗೆ ಭದ್ರಾವತಿ ಎಂಬ ಹೆಸರು ದಿ. ವಿಶ್ವೇಶ್ವರಯ್ಯನವರಿಂದ ಬಂದಿದೆ. ಕಬ್ಬಿಣದ ಕಾರ್ಖಾನೆ ಬರುವುದಕ್ಕಿಂತ ಮುಂಚೆ ಈ ಊರಿನ ಹೆಸರು 'ಬೆಂಕಿಪುರ' ಆ ಊರಿನ ಶಾಸನಗಳೇ ಸಾಕ್ಷಿ. ರೈಸರ ಸಂಪುಟದಲ್ಲಿ ಈ ಶಾಸನ ಅಚ್ಚಾಗಿದೆ. ಕೆಲವರು ವಿವರಿಸಿದ ಹಾಗೆ ದೇವನೂರು ಕೂಡ ಅಂತಹ ದಟ್ಟವಾದ ಕಾಡನ್ನು ಹೊಂದಿಲ್ಲ. ಬಾಣಾವರದಿಂದ ದೇವನೂರಿಗೆ ಹೋಗುವ ದಾರಿ, ಅದರ ಎಡಬಲದಲ್ಲಿ ಅಂತಹ ಯಾವ ಆಕರ್ಷಕವಾದ ರಮಣೀಯವಾದ ದೃಶ್ಯಗಳನ್ನು ಹೊಂದಿಲ್ಲ. ಕೆಂಪು ಮಣ್ಣಿನ ಪ್ರದೇಶ. ಇದು ಗಮನಾರ್ಹ. ಏಕೆಂದರೆ ಕೆಂಪುಮಣ್ಣಿನ ಭೂಮಿಯಲ್ಲಿ ಮುಂಗಾರಿನ ಬೆಳೆಗಳು ಮಾತ್ರ ಆಗುತ್ತವೆ. ಹಿಂಗಾರಿನ ಬೆಳೆ ಬಿತ್ತುಣಗಿ ನಡೆಯುವುದಿಲ್ಲ. ಹಂಸಧ್ವಜನ ಕಥೆಯಲ್ಲಿ ಆತನ ಪುತ್ರ ಸುಧನ್ವ ರಣಕ್ಕೆ ಹೋಗುವ ಮುನ್ನ ಆತನ ಪತ್ನಿ ಪ್ರಭಾವತಿ ರಣಕ್ಕೆ ಅದೇ ಕೃಷ್ಣನ ಸಖ-ಚಕ್ರಿಯ ಸಖ-ಅರ್ಜುನನೊಂದಿಗೆ ಯುದ್ಧ ಮಾಡಲು ಹೊರಟಿದ್ದಾನೆ. ರಣದ ಪರಿಣಾಮ ಅಲ್ಲಿ ಮುಕ್ತಿ. ಏಕೆಂದರೆ ಚಕ್ರಿಗೆ ಎದುರಾದ ಮೇಲೆ ವೈಕುಂಠನಾಥನ ಕರುಣೆ ಕೈವಲ್ಯ. ಎರಡು ಪದ್ಯಗಳು ಹೀಗಿವೆ :

ಯುಕ್ತಮಲ್ಲದು ರಮಣ ನಿನಗೆ ಕೇಳ್ ಕಾದುವಾ
ಸಕ್ತಿಯಿಂ ಚಕ್ರಿಗಭಿಮುಖನಾದ ಬಳಿಕಲ್ಲಿ
ಮುಕ್ತಿಯಲ್ಲದೆ ಬೇರೆ ಜಯಮುಂಟೆ ಜನಿಸದು ವಿವೇಕ ಸಂತತಿ ನಿನ್ನೊಳು ।
ವ್ಯಕ್ತದಿಂ ತನಗೊಂದಪತ್ಯಮುದಯಿಸದೊಡೆ ವಿ
ರಕ್ತಿಯಿಂ ಕೈವಲ್ಯಮಾದಪುದೆ ಸಮರಕು
ದ್ಯುಕ್ತನಪ್ಪಾತಂಗೆ ಸಂತಾನಮಿಲ್ಲದಿರಲಪ್ಪುದೇ ಹೇಳೆಂದಳು ॥

ಅದರಿಂದಮಾತ್ಮಜ ವಿವೇಕಮಿಲ್ಲದೊಡೆ ನನ
ಗಿದುವೆ ಜಲೋದಯದ ಋತುಸಮಯಮೀಪದದೊ
ಉದುಭವಿಸುವುದು ನಿನ್ನ ಭೂಮಿಯೊಳ್ ಬೀಜಮಂ ಬಿತ್ತಿದೊಡೆ ಬೆಳೆ ಬಾಳ್ಕೆಗೆ
ಕದನಕೈದುವ ವೇಳೆಯಲ್ಲೆನಲವಂ ಮುಂದೆ
ಬೆದೆಗಾಲಮುಂಟೆಂದೊಡವಳೆಣಿಸಿ ಮಳೆಗಳಂ
ತುದಿ ವಿಶಾಖೆಗೆ ಬಂದುದಿನ್ನು ಮೇಲಂಕುರಿಸಲರಿಯದೆನಲಿಂತೆಂದನು ॥

(ಕ. ಜೈ. ಭಾ. ಸಂ. ೧೧-೧೩, ೧೪)

ಇಲ್ಲಿ ನಮಗೆ ಆ ನಾಡ ಕೃಷಿಜ್ಞಾನ ಪ್ರಕಟವಾಗುತ್ತದೆ. ಹಿಂಗಾರಿ ಬೆಳೆ (ಬಿಳಿಜೋಳ, ಗೋಧಿ, ಅಗಸಿ, ಕುಸುಬಿ ಇತ್ಯಾದಿ) ದೇವನೂರಿನಲ್ಲಿ ಬೆಳೆಯುವ ಪ್ರಸಕ್ತಿಯೆ ಬರದು. ದೇವಪುರದಲ್ಲಿ – ಪರಿಸರದಲ್ಲಿ–ಉತ್ತರ ಕರ್ನಾಟಕದಲ್ಲಿ ಹಿಂಗಾರಿ ಬೆಳೆ ಸರ್ವೇ ಸಾಮಾನ್ಯ. ಇದೇ ಸುಧನ್ವ ಹೆಂಡತಿಯ ಆಶೆಯನ್ನು ಈಡೇರಿಸುವಲ್ಲಿ ರಣರಂಗಕ್ಕೆ ಹೋಗುವಲ್ಲಿ ತಡಮಾಡಿದುದಕ್ಕೆ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಕಾಸಿದ ಎಣ್ಣೆಯ ಕಡಾಯಿಗೆ ಹಾಕುವ ಸಂದರ್ಭ. ಆಗ ಸುಧನ್ವ – ವಿಷ್ಣುಭಕ್ತ–ದೇವರ ಸ್ತುತಿಮಾಡಿ ಆ ದಿವ್ಯವನ್ನು ಗೆದ್ದು ಯುದ್ಧಭೂಮಿಗೆ ಹೋಗುತ್ತಾನೆ. ಅಲ್ಲಿ ತಾನು ಅನುದಿನ ನೆನೆಸುವ ದಿವ್ಯ ಮೂರ್ತಿಯನ್ನು ನೋಡುತ್ತಾನೆ–ಕಣ್ದಣಿಯದೆ ನೋಡುತ್ತಾನೆ–ಆ ರೂಪು :

ಅತಸೀಕುಸುಮಗಾತ್ರನಂ ಕಮಲ ನೇತ್ರನಂ
ಸ್ಮಿತರುಚಿರ ಶುಭರದನನಂ ಚಾರುವದನನಂ
ಕೃತಮೃಗಮದೋಲ್ಲಸತ್ಸುಲಲಾಟನಂ ಮಣಿಕಿರೀಟನಂ ಕಂಬುಗಳದಾ ।
ಅತುಲ ತುಲಸೀಮಾಲನಂ ರಮಾಲೋಲನಂ
ಧೃತಕೌಸ್ತುಭೋದ್ಭಾಸನಂ ಪೀತವಾಸನಂ
ನುತ ಸಮಸ್ತಾಭರಣನಂ ಪುಣ್ಯಚರಣನಂ ಕಲಿ ಸುಧನ್ವಂ ಕಂಡನು ॥

(ಕಜೈಭಾ. ೧೩-೨೬)

'ಅತಸಿ' ಎಂದರೆ ನೀಲಿಹೂವನ್ನು ಬಿಡುವ ಬಿಳಿಜೋಳದ ಹೊಲಗಳಲ್ಲಿ ಬೆಳೆಯುವ 'ಅಗಸಿ' ಎಣ್ಣೆಗಾಳು. ದೇವನೂರಿನ ಕಡೆಯ ಜನಕ್ಕೆ ಇದು ಗೊತ್ತೆ ಇಲ್ಲ. ಏಕೆಂದರೆ ಇದು ಅಲ್ಲಿ ಬೆಳೆಯುವುದಿಲ್ಲ. ಅಲ್ಲಿ 'ಅತಸಿ' ಎಂದರೆ ಚೊಗಚಿ ಗಿಡ; ಅದರ ಹೂ ನೀಲ ಬಣ್ಣದ್ದಲ್ಲ. ವಿಷ್ಣು ನೀಲ ಮೇಘಶ್ಯಾಮ:' ಇದು ಜಗತ್ ಪ್ರಸಿದ್ಧ.

ಈ ವಿಷ್ಣದೇವತೆಯನ್ನು ಸ್ತುತಿಸಿದ ಹಾಗೆ ಕವಿ ಒಂದೆಡೆ ಪ್ರತ್ಯಕ್ಷಳಾದ ದೇವಿಯನ್ನು ಹೀಗೆ ಸುತ್ತಿಸಿದ್ದಾನೆ :

ತಾಯೆ ಪಾರ್ವತಿ ಪರಮಕಲ್ಯಾಣಿ ಶಂಕರ
ಪ್ರೀಯೆ ಸರ್ವೇಶ್ವರಿ ಜಗನ್ಮಾತೆ ಸನ್ನುತ
ಛಾಯೆ ಸಾವಿತ್ರಿ ಶಾರದೆ ಸಕಲ ಶಕ್ತಿರೂಪಿಣೆ ಕಾಳಿ ಕಾತ್ಯಾಯನಿ ।
ಶ್ರೀಯೆ ವೈಷ್ಣವಿ ವರದೆ ಚಂಡಿ ಚಾಮುಂಡಿ ನಿರ
ಪಾಯೆ ನಿಗಮಾಗಮಾರ್ಚಿತೆ ಮಂತ್ರಮಯಿ ಮಹಾ

ಮಾಯೆ ರಕ್ಷಿಪುದೆಂದು ಕೈಮುಗಿದು ಚಂದ್ರಹಾಸಂ ಬೇಡಿಕೊಳುತಿರ್ದನು ॥

(ಕ. ಜೈ. ಭಾ. ಸಂ. ೩೧–೭೨)

ಇಲ್ಲಿ ನಮಗೆ 'ಸನ್ನುತ ಛಾಯೆ' ಎಂಬ ಸ್ತುತಿ ಬಹಳ ಮಹತ್ವದ್ದು. ಏಕೆಂದರೆ ಈ ಕವಿಯು ಹೇಳಿರುವ ದೇವಪುರದಿಂದ ಕೇವಲ ಹತ್ತು ಹರಿದಾರಿಯ (ಹಕ್ಕಿ ಹಾರುವ ಮಾರ್ಗವಾದರೆ ೧೬ ಮೈಲಿ) ಅಂತರದಲ್ಲಿ ಕೃಷ್ಣಾನದಿಯ ದಡದಲ್ಲಿ ಛಾಯಾದೇವಿಯ ಗುಡಿ ಇದೆ. ಕೃಷ್ಣಾನದಿಯ ಈ ಪ್ರದೇಶ ಮಹಾಭಾರತದಷ್ಟು ಪ್ರಾಚೀನ.[೧೦] ಇಲ್ಲಿರುವ ಹಲವು ತೀರ್ಥಗಳಲ್ಲಿ ಒಂದಾದ 'ದೇವ ಹೃದಯ' ಮಹಾಭಾರತದಲ್ಲಿ ಉಲ್ಲೇಖ ಗೊಂಡಿದೆ. ಇದೊಂದು ನೈಸರ್ಗಿಕವಾದ ಗುಹಾದೇವಾಲಯ. "ಆದೀತು ಕಾಶಿ ಆಗಲಾರದ್ದು ಛಾಯಾ" ಎಂಬುದು ಈಗ ೫೦ ವರ್ಷಕ್ಕೂ ಹಿಂದೆ ಇದ್ದ ಒಂದು ಲೋಕೋಕ್ತಿ; ಗಾದೆ. ಆಗ ಆ ದೇವಾಲಯವನ್ನು ಮುಟ್ಟಲು ತುಂಬ ಕಠಿಣವಾದ ಮಾರ್ಗವನ್ನು ಗಮಿಸಬೇಕಾಗಿತ್ತು. ಸಗರ ನಾಡಿನ ಜನಕ್ಕೆ ಅಂದು ಇಂದು ಛಾಯಾಭಗವತೀ ಪರಿಚಯವಿರುವಷ್ಟು ದೇವನೂರಿಗೆ ಅಲ್ಲಿನ ಜನಕ್ಕೆ ಎಂದೂ ಇದ್ದಿಲ್ಲ.[೧೧].

**ಪರಿಚಿತವಾದ ಸಂಗತಿ** ಅತಸೀಕುಸುಮವನ್ನು ನೋಡಿದ ಕವಿಗಳಿಗೆ ತಮ್ಮ ಕಾವ್ಯದಲ್ಲಿ ಅದರ ಹೋಲಿಕೆಯನ್ನು ಕೊಡಲು ಸಾಧ್ಯ. ದೇವನೂರು ಪ್ರದೇಶದಲ್ಲಿ ಅತಸೀ/ಅಗಸಿ ಬೆಳೆಯದು. ಹೀಗೆಯೆ ಇಡೀ ಕಾವ್ಯದಲ್ಲಿ ಇರುವ ವಿಶೇಷ ಸಸ್ಯ ಸಂಪತ್ತು ಹಾಗೂ ಪ್ರಾಣಿ ಸಂಪತ್ತಿನ ಬಗ್ಗೆ ಅಧ್ಯಯನ ಮಾಡಿ ಒಂದು ನಿಲುಗಡೆಗೆ ಬರಲು ಸಾಧ್ಯವಿದೆ. ಒಂದು ಉದಾ. ಇದನ್ನು ವಿವರಿಸುವೆ –

ನೀಲಧ್ವಜನು ತನ್ನ ಹೆಂಡತಿ ಜ್ವಾಲೆಯ ಮಾತನ್ನು ಕೇಳದೆ ಅಶ್ವಮೇಧದ ಕುದುರೆ ಯನ್ನು ಕಟ್ಟಿಹಾಕದೆ ಬಿಟ್ಟು ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಾನೆ–

ಕೊಂಡು ಬರಿಸಿದನಖಿಳ ವಸ್ತುಗಳನಮಲ ಮಣಿ
ಮಂಡನಾಳಿಗಳಂ ವಿವಿಧ ದುಕೂಲಂಗಳಂ
ಹಿಂಡಾಕಳಂ ಮಹಿಷಿಗಳನುತ್ತಮಸ್ತ್ರೀಯರಂ ಗಜಹಯಾವಳಿಯನು ।
ಭಂಡಾರದರ್ಥಮಂ ಗುಡತೈಲ ಧಾನ್ಯಮಂ
ಬಂಡಿಗಳ ಮೇಲೆ ತುಂಬಿಸಿ ಪಾರ್ಥನಂ ಬಂದು
ಕಂಡನಸಿತಧ್ವಜಂ ಬಳಿಕವನನರ್ಜುನಂ ಪ್ರೀತಿಮಿಗೆ ಮನ್ನಿಸಿದನು ॥

(ಕಜೈಭಾ. ಸಂ.೯–೧೯)

ಚಿಕ್ಕಮಗಳೂರು–ದೇವನೂರು–ಮೈಸೂರು ಸಂಸ್ಥಾನ ಪ್ರದೇಶದಲ್ಲಿ 'ಹಸು' ಎಂದು ಹೇಳುತ್ತಾರಲ್ಲದೆ 'ಆಕಳು' ಶಬ್ದ ಬಳಸರು! 'ಆಕಳು' ಎಂಬ ಶಬ್ದ ಸುರಪುರ ತಾಲೂಕು ಹಾಗೂ ಉತ್ತರ ಕರ್ನಾಟಕದಲ್ಲಿ ಸರ್ವೇಸಾಮಾನ್ಯ. 'ಹಿಂಡಾಕಳಂ' ಶಬ್ದ ಪರಿಸರವನ್ನು ಸೂಚಿಸಿ ಕವಿಯ ಸ್ಥಳ ಉತ್ತರ ಕರ್ನಾಟಕದ 'ದೇವಪುರ' ಎಂದು ಸೂಚಿಸುತ್ತದೆ. ಮತ್ತೆ ಈ ಪದ್ಯದಲ್ಲಿ ಬರುವ 'ಭಂಡಾರ' (>ಭಣ್ಡಾರ) ಶಬ್ದವೂ ಸರಿಯಲ್ಲ.

ಶಬ್ದಮಣಿದರ್ಪಣಕಾರ ಹೊಯ್ಸಳ ದೊರೆ ಸೋಮೇಶ್ವರನ ಕಟಕದಾಚಾರ್ಯ 'ಮಾಣಿಕ್ಯ ಭಂಡಾರ' ಪ್ರಯೋಗ ತಪ್ಪೆಂದು ಹೇಳಿದ್ದಾನೆ.[೧೨] ಭಣ್ಡಾರ/ಬಂಡಾರ. ಉತ್ತರಕರ್ನಾಟಕದಲ್ಲಿ ಇದು ಸಾಮಾನ್ಯ. ಕಾವ್ಯಾವಲೋಕನ ಪದ್ಯ ೨೮೪ : ತರವೇಳ್ಮಾಣಿಕ್ಯ ಭಂಡಾರದ ಪುಡಿಕೆಗಳಂ; ಇತ್ಯಾದಿ.

ದೇವನೂರಿನಲ್ಲಿ ದೇವಾಲಯವಿದೆ, ಮೂರ್ತಿ ಇದೆ, ಮತ್ತೆ ದೇವಪುರದಲ್ಲಿ ಏನಿದೆ? ಎಂಬ ಪ್ರಶ್ನೆಗೆ ಮರುಪ್ರಶ್ನೆ ಆ ಮೂರ್ತಿಗಳ ಪಾದಪೀಠ (pedestal)ದಲ್ಲಿ ಉದಾ : ಬೇಲೂರಿನ ಕೇಶವದೇವರನ್ನು ಶಾಂತಲಾದೇವಿ ಮಾಡಿಸಿದ ಹಾಗೆ ಅಲ್ಲಿನ ಇಂದು ಪೂಜೆ ಮಾಡುವ 'ವಿಜಯ ನಾರಾಯಣ' ಮೂರ್ತಿಯನ್ನು ವಿಷ್ಣುವರ್ಧನ ಮಾಡಿಸಿದ ಹಾಗೆ[೧೩] ದೇವನೂರಿನ ಮೂರ್ತಿಗಳ ಪೀಠಗಳಲ್ಲಿ ಶಾಸನಗಳಿದೆಯೆ ಎಂದು? 'ಲಕ್ಷ್ಮೀಶ ಕವಿಯದು ಎಂದು ತೋರಿಸುವ ಮೂರ್ತಿ ತಿರುಮಟಿಶೈ ಆಳ್ವಾರರಮೂರ್ತಿ. ಮೂರ್ತಿಶಾಸ್ತ್ರ (Iconography) ಗ್ರಂಥಗಳನ್ನು ಒಂದು ಸಲ ತೆರೆದು ನೋಡಲಿ. ಇನ್ನು ವಿಷ್ಣುಮೂರ್ತಿ ಹೊಯ್ಸಳರ ಕಾಲದ ಮೂರ್ತಿ. ಮೂರ್ತಿಲಕ್ಷಣದ ಶಾಸ್ತ್ರದಿಂದ ಇದು ಗದಾ ಪದ್ಮ, ಚಕ್ರ ಹಾಗೂ ಶಂಖಗಳನ್ನು ಹಸ್ತದಲ್ಲಿ ಹೊಂದಿದೆ = ಗಪಚಶಂ = ಅಚ್ಯುತನ ಮೂರ್ತಿ. ಕನ್ನಡ ಜೈಮಿನಿ ಭಾರತದಲ್ಲಿ ಅರ್ಜುನನ ಮುಖಾಂತರ ಲಕ್ಷ್ಮೀಶನು ಕಂಡ ಮೂರ್ತಿ ಇಂತಿದೆ:

ಪುಷ್ಕರ ಗದಾ ಶಂಖಚಕ್ರ ಶೋಭಿತ ಕರಚ  
ತುಷ್ಕದಿಂ ಶ್ರೀವತ್ಸಕೌಸ್ತುಭಾಭರಣದಿಂ  
ನಿಷ್ಕಳಂಕೇಂದುಮಂಡಲ ಸದೃಶವನದಿಂ ನವ ಪೀತವಾಸದಿಂದೆ ।  
ಪುಷ್ಕಲಶ್ಯಾಮಕೋಮಲ ರಾಮಣೀಯಕವ  
ಪುಷ್ಕಾಂತಿಯಿಂದೆಸೆವ ನಿನ್ನ ರೂಪೆರ್ದೆಯೊಳಿರೆ  
ದುಷ್ಕಂಟಕದ ಭೀತಿಯೆಮಗದೇಕೆಲೆ ದೇವ ಸಲಹೆಂದನಾ ಪಾರ್ಥನು ॥

(ಕ. ಜೈ. ಭಾ. ಸಂ. ೧೫-೩೬)

ಮೂರ್ತಿಶಾಸ್ತ್ರ ದೃಷ್ಟಿಯಿಂದ ಇದನ್ನು 'ಅಧೋಕ್ಷಜ' ಮೂರ್ತಿ ಎಂದು ಹೇಳಲಾಗುತ್ತದೆ.[೧೪] ಲಕ್ಷಣ : ಪಗಶಂಚ.

ಈ ಲಕ್ಷ್ಮೀಶನು ಚಂದ್ರಹಾಸನ ಮುಖಾಂತರ ಕಂಡ ಇನ್ನೊಂದು ಮೂರ್ತಿ-ವಿಷ್ಣು ವಿಗ್ರಹ-ಇಂತಿದೆ.

ಕಂಬುಚಕ್ರಾಬ್ಜ ಕೌಮೋದಕಿಗಳಂ ಧರಿಸಿ  
ಪೊಂಬಟ್ಟೆಯಂ ತಾಳ್ದು ಕೌಸ್ತುಭದ ಶೋಭಾವ  
ಲಂಬದಿಂ ಸರ್ವಾಭರಣ ವಿಭೂಷಿತನಾಗಿ ದಿವ್ಯಮಾಲೆಗಸನಾಂತು ।  
ತುಂಬಿದವಯವದ ಲಾವಣ್ಯಲಹರಿಗಳ ವಿಸ  
ಟಂಬರಿವ ಕರುಣರಸದೆಳನಗೆಯ ಸಿರಿಮೊಗದ  
ಶಂಬರಾರಿಯ ಪಿತಂ ಪಾರ್ಥನರಥಾಗ್ರದೊಳ್ ಕಣ್ಗೆಸೆದನಾ ನೃಪತಿಯ ॥

(ಕಜೈಭಾ. ಸಂಧಿ. ೩೨-೧೧)

ಇಲ್ಲಿನ ಮೂರ್ತಿಯ ಲಕ್ಷಣ ಶಂಚಪಗ =ಹರಿ ಎಂದಾಗುತ್ತದೆ; ಹೆಚ್ಚಿನ ಆಕರಗಳಲ್ಲಿ ಇನ್ನೊಂದು ವಿಗ್ರಹದ ಲಕ್ಷಣ ಬಹಳ ಪ್ರಸಿದ್ಧವಾದ ಕಕಾರದ ಬಳ್ಳಿಯ ವಿವರಣೆಯಲ್ಲಿ ಬರುತ್ತದೆ.

ಕಮಲದಳನಯನ ಕಾಳಿಯಮಥನ ಕಿಸಲಯೋ
ಪಮಚರಣ ಕೀಶಪತಿಸೇವ್ಯ ಕುಜಹರ ಕೂರ್ಮ
ಸಮಸತ್ಕಪೋಲ ಕೇಯೂರಧರ ಕೈರವಶ್ಯಾಮ ಕೋಕನದ ಗೃಹೆಯ ।
ರಮಣ ಕೌಸ್ತುಭಶೋಭ ಕಂಬುಚಕ್ರಗದಾಬ್ಜ
ವಿಮಲಕರ ಕಸ್ತೂರಿಕಾತಿಲಕ ಕಾವುದೆಂ
ದಮಿತ ಪ್ರಭಾಮೂರ್ತಿಯಂ ನುತಿಸಲಾತನುಂ ಹರಿ ನೆಗಪಿದಂ ಕೃಪೆಯೊಳು ॥

(ಕಜೈಭಾ. ಸಂ. ೫-೮)

ಇಲ್ಲಿನ ಮೂರ್ತಿಯ ಲಕ್ಷಣ ಶಂಚಗಪ ವಾಮನ ವಿಗ್ರಹಕ್ಕೆ ಸರಿ ಹೊಂದುತ್ತದೆ. ಈ ಮೂರೂ ಮೂರ್ತಿಗಳ ಲಕ್ಷಣದೊಂದಿಗೆ ದೇವನೂರ ಮೂರ್ತಿಯ ಲಕ್ಷಣ ಹೊಂದುವುದಿಲ್ಲ. ಅರ್ಥಾತ್ ದೇವನೂರಿನ ಮೂರ್ತಿಯನ್ನು ಲಕ್ಷ್ಮೀಶ ನೋಡಿದ್ದನೆಂದೂ ಆರಾಧಿಸಿದನೆಂದೂ ಹೇಳುವುದಕ್ಕೆ ಆಧಾರವೇ ಇಲ್ಲ.[೧೫] ದುರ್ದೈವ ದೇವಪುರದಲ್ಲಿ ಆಗಲಿ ಏವೂರಲ್ಲಿ ಆಗಲಿ ವಿಷ್ಣುವಿನ ದೇವಾಲಯಗಳು ಉಳಿದು ಬಂದಿಲ್ಲ. ಕವಿಯು ಹೇಳಿದ 'ದೇವಪುರ ಲಕ್ಷ್ಮೀರಮಣ' ಎಂಬಲ್ಲಿನ 'ದೇವಪುರ' ಸುಳ್ಳಲ್ಲ. 'ದೇವನೂರು' ಕವಿಯ ಊರು ಎಂಬುದು ಸರಿಯಲ್ಲ. ದಿವಂಗತ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಹಾಗೂ ದೇವನೂರಿನ ದಿ. ರಾಘವ ಅಯ್ಯಂಗಾರ್ ಸ್ನೇಹಿತರೀರ್ವರ ಸೃಷ್ಟಿ. ಅಸಿಸ್ಟೆಂಟ್ ಕಮೀಷನರ್ ಹುದ್ದೆ ಅಲಂಕರಿಸಿದ ಮಾಸ್ತಿ ಅವರ ದರ್ಬಾರ್! ಅದಕ್ಕೆ ಅವರ ಸ್ನೇಹಿತವೃಂದ ಕುಮ್ಮಕ್ಕು ಕೊಟ್ಟಿತು. ಬೇಂದ್ರೆ ತಂದೆ ಮಕ್ಕಳು ಅವರ ಕೃಪಾಛತ್ರದಲ್ಲಿದ್ದವರು. ಬೇಂದ್ರೆ ಅವರಿಗೆ ಅವರ ಬದುಕು-ಜೀವನ-ನಡೆಸಲು ಕಷ್ಟವಾದ ಕಾಲದಲ್ಲಿ ಸುಖದಿಂದ ಇರಲು ತಪ್ಪದೆ ಕಳಿಸಿದ ಮಾಸ್ತಿ ಅವರ ಹಣ ಋಣ ಅವರ ಆಶೆಗೆ ತಕ್ಕಂತೆ ತಮ್ಮ ಬರವಣಿಗೆಯನ್ನು ಮಾಡಲು ಕಾರಣವಾಯಿತು. 'ಸೃಷ್ಟಿಸಟೆ' 'ದೃಷ್ಟಿದಿಟ' ಎಂಬ ಬೇಂದ್ರೆ ಉಕ್ತಿಗಳನ್ನೇ ಆಧರಿಸಿ ದೃಷ್ಟಿಗೆ ಕಾವ್ಯದಲ್ಲಿ ಕಾಣುವ 'ದೇವಪುರ' ಗ್ರಾಮವನ್ನು ಕರ್ನಾಟಕದ ವಿದ್ವದ್ ವಲಯ ಒಪ್ಪಲಿ. ದಿ.ರೆ. ಎಫ್. ಕಿಟ್ಟೆಲ್, ದಿ.ಟಿ.ಎಸ್. ವೆಂಕಣ್ಣಯ್ಯ, ದಿ.ಎಂ. ಆರ್. ಶ್ರೀ, ನಾ. ಶ್ರೀ. ರಾಜಪುರೋಹಿತ ಮೊದಲಾದ ನಿಸ್ಪೃಹ ವಿದ್ವಾಂಸರು ಕಾವ್ಯವನ್ನು ಆಧರಿಸಿ ಒಪ್ಪಿಕೊಂಡ 'ದೇವಪುರ' ಎಂಬ ಸ್ಥಳವೇ ಮಹಾಕವಿ ಲಕ್ಷ್ಮೀಶನ ಸ್ಥಳ.[೧೬] ಮತ್ತೆ ಆತ ಹರಿ, ಹರ, ಪಾರ್ವತಿ ಹಾಗೂ ವಿನಾಯಕರನ್ನು ಪೂಜಿಸಿದ ಭಾಗವತಕವಿ; ಶ್ರೀ ವೈಷ್ಣವ ಪಂಥದ ಕವಿಯಲ್ಲ.



ಬೇಲೂರಿನ ಈಗ ಪೂಜೆಗೊಳ್ಳುತ್ತಿರುವ ನಾರಾಯಣಮೂರ್ತಿ

ಶಾಸನ : ಜಿಷ್ಣುರ್ವಿಷ್ಣು ಮಹಿಪಾಳಃ ಪಾಳಿತಾಖಿಳಭೂತಳಃ
ದೇವದೇವೇಶ ವಿಜಯನಾರಾಯಣಮಚೀಕರತ್ ॥

ಎಪಿ.ಕ. ಸಂಪುಟ-೯ (೧೯೯೦) ಶಾ. ೧.ಪು. ೧.

ನಾರಾಯಣಮೂರ್ತಿಯ ಲಕ್ಷಣ : ಶಂಚಗಪ :
ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನಮಾಲಿನಮ್
ಶಂಖಚಕ್ರಗದಾಪದ್ಮೈರಭಿವ್ಯಕ್ತ ಚತುರ್ಭುಜಮ್ ॥ (ಭಾಗವತ : ೪-೯-೫೦)



**ದೇವನೂರು ಲಕ್ಷ್ಮೀರಮಣಸ್ವಾಮಿ**

ಕೃಪೆ : ಕಜ್ಯೈಭಾ. ಕರ್ನಾಟಕ ಸರ್ಕಾರದ ಪ್ರಕಟಣೆ (೧೯೫೬)

ಮೂರ್ತಿಲಕ್ಷಣ : ಗದಾ ಪದ್ಮ ಚಕ್ರ ಶಂಖ ಕಜ್ಯೈಭಾ. ಕರ್ತೃ ಲಕ್ಷ್ಮೀಶ ಈ ಮೂರ್ತಿಯನ್ನೇ ಸ್ತುತಿಸಿಲ್ಲ. ಆದುದರಿಂದ ಇದರ ಉಪಾಸಕ ಆತನಲ್ಲ, ಅರ್ಥಾತ್ ಇದರೊಂದಿಗೆ ಅವನ ಚರಿತ್ರೆಯನ್ನು ಜೋಡಿಸಿ ಹೇಳುವುದು ಸರಿಯಲ್ಲ.

## II

ಮಹಾಕವಿ ಲಕ್ಷ್ಮೀಶನ ಕಾಲದ ಬಗೆಗೂ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕ್ರಿ.ಶ. ೧೧೩೭–೧೨೦೦ರ ವರೆಗೆ ತೂಗುತ್ತಿದ್ದುದು ಬಿಜಾಪುರ ಜಿಲ್ಲೆಯ ಖೇಡಬುಯ್ಯರದ ಗೋಪ ಕವಿ ಇಮ್ಮಡಿ ಹಾವಳಿ ಭೈರವೇಂದ್ರನ ಆಸ್ಥಾನದಲ್ಲಿ ಇದ್ದು, 'ನಂದಿ ಮಹಾತ್ಮೆ' ಹಾಗೂ 'ಚಿತ್ರ ಭಾರತ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಅವನು ಲಕ್ಷ್ಮೀಶನನ್ನು 'ಲಕ್ಷ್ಮೀಪತಿ' ಎಂದು ಸ್ಮರಿಸಿದ್ದಾನೆ. ಈ ಆಧಾರದ ಮೇಲೆ ಈಗ 'ಲಕ್ಷ್ಮೀಶ' ಕವಿಯ ಕಾಲ ೧೧೩೭ರಿಂದ ೧೫೩೦ರವರೆಗೆ[೧೭] ತೂಗುಯ್ಯಾಲೆಯಲ್ಲಿ ಇದೆ. ಕಪಟರಾಳ ಕೃಷ್ಣರಾಯರು ಕನ್ನಡ ಸಾಹಿತ್ಯ ಪರಿಷತ್ತಿಗೆ ದೇವಪುರದ 'ಕನ್ನಡ ಜೈಮಿನಿ ಭಾರತ' ಕೃತಿಯ ಹಸ್ತಪ್ರತಿಯನ್ನು ರಕ್ಷಿಸಲು ದಿ.ಬಿ.ಎಂ. ಶ್ರೀ ಅವರಿಗೆ ಕೊಡಿಸಿದ್ದರು. ಅದು ಇಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಇಲ್ಲ–ಕಳೆದುಹೋಗಿದೆ. ಅದರ ಒಕ್ಕಣೆ ದಿ.ನಾ. ಶ್ರೀ. ರಾಜಪುರೋಹಿತ ಹಾಗೂ ದಿ.ದ.ರಾ. ಬೇಂದ್ರೆ ತಮ್ಮ ಬರಹಗಳಲ್ಲಿ ಉಳಿಸಿಕೊಟ್ಟಿದ್ದಾರೆ. ಅದು ಕ್ರಿ.ಶ. ೧೧೦೦ರಲ್ಲಿ ಬಂದ 'ವಿಕ್ರಮ'ನಾಮ ಸಂವತ್ಸರಕ್ಕೆ ಸರಿ ಹೋಗುತ್ತದೆ. ಶಾಲಿವಾಹನ ಶಕ ವರ್ಷ ೧೦೨೨, ವಿಕ್ರಮಸಂವತ್ಸರದ ಆಶ್ವೀನ್ ಬಹುಳ ಸಪ್ತಮಿ ಗುರುವಾರದಂದು ಈ ಕೃತಿಯನ್ನು ಕವಿ ಲಕ್ಷ್ಮೀಶ ಸಂಪೂರ್ಣಗೊಳಿಸಿದ್ದಾನೆ.[೧೮]

ಇಲ್ಲಿಯೂ ಕೂಡ ನಮ್ಮ ವಿದ್ವಾಂಸರು ಶುದ್ಧವಾದ ಪರಂಪರಾಗತ ಮಾನದಂಡವನ್ನು ಬಳಸಿಲ್ಲ. ಪಂಪ, ರನ್ನರು ನಡೆದ ಪದ್ಧತಿಯಲ್ಲೇ[೧೯] ಲಕ್ಷ್ಮೀಶನೂ ನಡೆದಿದ್ದಾನೆ.

> ಬಗೆಯರಿದರಾವಲಕ್ಷಣದಿಂದೆ ಮುನ್ನಕ
> ಬ್ಬಿಗಳನುಸುರಿದರದೇ ಲಕ್ಷ್ಯಮಲ್ಲದೆ ಪೆರತೆ
> ನಗೆ ಸಲ್ಲದದರಿಂದೆ ಪೂರ್ವ್ವಸತ್ಕವಿಗಳಿಗೆ ನಮಿಸಿ ನಾಂ ಕೃತಿವೇಳ್ವೆನು ॥
>
> (ಕ ಜೈ ಭಾ. ೧–೧೦)

ಪಂಪ ವಿಕ್ರಮಾರ್ಜುನ ವಿಜಯದ ನಾಂದೀಪದ್ಯದಲ್ಲಿ ತನ್ನ ಆಶ್ರಯದಾತನನ್ನು ವ್ಯತಿರೇಕ ಅಲಂಕಾರದ ಮುಖೇನ ಹೇಳಿದ್ದಾನೆ.

> ಶ್ರೀಯನರಾತಿಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ
> ಜೀಯನೆ ಬೇಡಿಕೊಳ್ಳದೆ ವಿರೋಧಿನರೇಂದ್ರರನೊತ್ತಿಕೊಂಡುಮಾ
> ತ್ಮೀಯ ಸುಪುಷ್ಪವೃಷ್ಟಿಯನೊಡಂಬಡೆತಾಳ್ದಿಯುಮಿಂತುದಾತ್ತನಾ
> ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ ॥

ನಾರಾಯಣನಿಗಿಂತ ಉದಾತ್ತ ನಾರಾಯಣನಾದ ಅರಿಕೇಸರಿ ದೊಡ್ಡವನು. ಮತ್ತೆ ಕವಿಚಕ್ರವರ್ತಿಯಾದ ರನ್ನನು ಸಾಹಸಭೀಮ ವಿಜಯದಲ್ಲಿ ನಾಂದೀ ಪದ್ಯದಲ್ಲಿಯೆ ತನ್ನ ನಾಯಕನನ್ನು–ಆಶ್ರಯದಾತನನ್ನು–ಹೀಗೆ ಸ್ತುತಿಸಿದ್ದಾನೆ:

> ಶ್ರೀಯುವತೀಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿದೈ
> ತೇಯನನಂತಭೋಗನಿಲಯಂ ಪ್ರತಿಪಾಲಿತ ಧರ್ಮಚಕ್ರನ
> ಬ್ಜಾಯತನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾ
> ರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ ॥

ಅಂತೆಯೆ ಮಹಾಕವಿ ಲಕ್ಷ್ಮೀಶನೂ ತನ್ನ ಕಾವ್ಯದಲ್ಲಿ ನಾಂದಿಯಲ್ಲೇ 'ಆಶೀ' ಮುಖಾಂತರ ಕಾವ್ಯವನ್ನು ಆರಂಭಿಸಿದ್ದಾನೆ. ತನ್ನ ಕಾಲದ ರಾಜರನ್ನೂ ಆಶ್ರಯದಾತರನ್ನೂ ಪ್ರೇರಣೆಯನ್ನಿತ್ತವರನ್ನೂ ಏನೆಲ್ಲ ಹೇಳಿದ್ದಾನೆ, ಪೀಠಿಕಾ ಭಾಗದಲ್ಲಿ ಮತ್ತು ಮುಕ್ತಾಯದಲ್ಲಿ. ಸತ್ಯವನ್ನು ನೋಡುವ ಕಣ್ಣು–ಮನಸ್ಸು–ಇವು ಬೇಕು.

ನಾಂದೀ ಪದ್ಯಗಳಲ್ಲಿ ತನ್ನ ಕಾಲದ ರಾಜನನ್ನು ಸ್ತುತಿಸಿದ್ದಾನೆ. ಆತನೆಂದರೆ 'ಚಂದ್ರ'. ನಮಗೆ ಆನಂದವನ್ನು ಕೊಡಬೇಕಾದ ವ್ಯಕ್ತಿ ಲಕ್ಷ್ಮೀರಮಣನ ಆಸ್ಯಚಂದ್ರ ಮುಖವಿಲ್ಲದಿದ್ದರೆ ಮನುಷ್ಯನಿಗೇನು ಬೆಲೆ? ಅದು ಸುಂದರವಾಗಿದ್ದರೆ ಅದಕ್ಕೊಂದು ಬೆಲೆ. ರಾಜರನ್ನು ಚಕ್ರವರ್ತಿಗಳನ್ನು 'ವಿಷ್ಣು' ದೇವತೆಯಲ್ಲಿ ಆರೋಪಿಸಿ ಸಮೀಕರಿಸಿ ಹೇಳುವುದು ರೂಢಿ[೨೦]. ನಾ ವಿಷ್ಣುಃ ಪ್ರಜಾಪತಿಃ ಲಕ್ಷ್ಮೀಶನು ಈ ಮೊದಲನೆಯ ಪದ್ಯದಲ್ಲಿ ತನ್ನ ಕಾಲದ ಚಕ್ರವರ್ತಿ ಚಂದ್ರನನ್ನು ಸ್ತುತಿಸಿದ್ದಾನೆ. ಆ ಚಂದ್ರನೆಂದರೆ ಚಾಳುಕ್ಯ ಚಕ್ರವರ್ತಿ೨ನೇ ಸೋಮೇಶ್ವರ (ಸೋಮ=ಚಂದ್ರ) ಯಾರಿಗೆ ಚಾಲುಕ್ಯ ಚಂದ್ರ ಎಂದು ಕರೆಯುತ್ತಿದ್ದರು :

೧. ತಸ್ಮಾದಜಾಯತ ಜಗಜ್ಜನಿತ ಪ್ರಮೋದಃ
ಶೃಂಗಾರವೀರರಸಿಕಃ ಕವಿಲೋಕಕಾನ್ತಃ
ಕಾನ್ತಾವಿಲೋಲ ನಯನೋತ್ಪಲ ಚಾರುಚಂದ್ರ ಃ
ಚಾಳುಕ್ಯವಂಶತಿಲಕೋಭುವನೈಕಮಲ್ಲಃ ॥[೨೧]

೨. ಚಾಲುಕ್ಯ ಚಂದ್ರಸ್ಯ ಸೋಮೇಶ್ವರ ಮಹೀಪತೇಃ[೨೨]

ಇತ್ಯಾದಿಗಳನ್ನು ಗಮನಿಸಿ.

ಸಗರನಾಡಿನ ಪ್ರಭುಗಳಾದ ಹೈಹಯ ವಂಶದ ಅರಸರನ್ನೂ–ವಂಶವನ್ನೂ– ಅನಂತರ ತನಗೆ ಆಶ್ರಯವನ್ನಿತ್ತ ಲಕ್ಷ್ಮೀಕಾಂತರವಿಯಣಭಟ್ಟನನ್ನೂ ಯಾರು ಸಂಗೀತಗಾರನಾಗಿದ್ದನು ಮತ್ತು ೧ನೇ ಸೋಮೇಶ್ವರ ೨ನೇ ಸೋಮೇಶ್ವರ ಹಾಗೆಯೆ ೬ನೇ ವಿಕ್ರಮಾದಿತ್ಯನ ಮಂತ್ರಿಯಾಗಿದ್ದನು ಯಾರು ' ನಿರ್ವಾಣಪುರ' ಎಂದರೆ ಏಹುರ (ಏವೂರ) ಸ್ಥಳವನ್ನು ಉಂಬಳಿಯಾಗಿ ಹೊಂದಿದ್ದನೊ ಆತನನ್ನೂ ಏನೆಲ್ಲ ಸಂಗತಿಗಳನ್ನು ಹನ್ನೆರಡು ಪದ್ಯಗಳಲ್ಲಿ ಅಲ್ಲಲ್ಲಿ ವಿವರಿಸಿದ್ದಾನೆ. ಕಾವ್ಯದ ಕೊನೆಯಲ್ಲಿ ಮತ್ತೆ ತನಗೆ ಕಾವ್ಯ ಬರೆಯಲು ಕಾರಣನಾದ 'ಶೃಂಗಾರರಸಿಕ' ಅರ್ಥಾತ್ "ಶೃಂಗಾರ ಕುಸುಮತರು" ಸೋಮೇಶ್ವರನ ಉಲ್ಲೇಖದೊಂದಿಗೆ ಮುಕ್ತಾಯಗೊಳಿಸಿದ್ದಾನೆ:

ಪುಣ್ಯಮಿದು ಕೃಷ್ಣಚರಿತಾಮೃತಂ ಸುಕವೀಂದ್ರ
ಗಣ್ಯಮಿದು ಶೃಂಗಾರಕುಸುಮತರು ತುರುಗಿದಾ
ರಣ್ಯಮಿದು ನವರಸಪ್ರೌಢಿ ಲಾಲಿತ್ಯ ನಾನಾವಿಚಿತ್ರಾರ್ಥಂಗಳ
ಗಣ್ಯಮಿದು ಶಾರದೆಯ ಸನ್ಮೋಹನಾಂಗಲಾ
ವಣ್ಯಮಿದು ಭಾವಕರ ಕಿವಿದೊಡವಿಗೊದವಿದಹಿ
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ ॥

(ಕಜೈಭಾ. ಸಂ. ೩೪–೪೬)

ಮಹಾಕವಿಯಾದ ವ್ಯಕ್ತಿ ಮಹಾಥಂವಸ್ಸನ್ನು ಹುಡುಕುತ್ತಾನೆ; ಅದರಲ್ಲಿ ಕಾವ್ಯ ರಚಿಸುತ್ತಾನೆ. ರಸದ ತರಂಗಿಣಿಯನ್ನು ಹರಿಸುತ್ತಾನೆ. ಲಕ್ಷ್ಮೀಶನೂ ಈ ಷಟ್ಪದಿಯನ್ನು ಸೃಷ್ಟಿಸಿ ಒಂದು ಹೊಸ ಕಾವ್ಯವನ್ನು ಅಂದು ಕನ್ನಡಕ್ಕೆ ನೀಡಿದ. ಪೂರ್ವೋಕ್ತ ಶರಣ ಸರೋಜದಲ್ಲಿ ಸಾಕಷ್ಟು ವಿಸ್ತಾರವಾಗಿ ವಿವರಿಸಿದ್ದೇನೆ. ಮಹಾಕವಿ ಲಕ್ಷ್ಮೀಶನ ಸ್ಥಳ ದೇವಪುರ ಮತ್ತು ಕಾಲ ಕ್ರಿ.ಶ. ೧೧೦೦ರ ಎಡಬಲ.

## ಅನುಬಂಧ –I
## ಲಕ್ಷ್ಮೀಶನ ಜನ್ಮಸ್ಥಳ ದೇವಪುರ

ಮಾನ್ಯರೆ,

ಡಾ. ಟಿ.ಆರ್. ಪಾಂಡುರಂಗ ಅವರು ನಾನು ಆಧಾರ ಕೊಡದೆ ಮಹಾಕವಿ ಲಕ್ಷ್ಮೀಶನ ಸ್ಥಳವು ದೇವಪುರ ಎಂದು ಹೇಳಿರುವೆನೆಂದು ಬರೆದಿದ್ದಾರೆ, (ಪ್ರವಾ. ೪–೧೨–೨೦೦೧) ಗುಲ್ಬರ್ಗಾದಲ್ಲಿ ನಡೆದ ಗೋಷ್ಠಿಗೂ ಅವರು ಬಂದಿದ್ದಿಲ್ಲ. ೧೮ ಪುಟದ ಲೇಖನವನ್ನು ಅಂದು ಸಾದರಪಡಿಸಿದ್ದೇನೆ–ಸಾರ್ವಜನಿಕರ ಮುಂದೆ. ಅದು ಪುಸ್ತಕ ರೂಪದಲ್ಲಿ ಬರುತ್ತದೆ ಎಂದು ಅಂದು ತಿಳಿಸಲಾಗಿದೆ. ಗ್ರಂಥದಲ್ಲಿ ೪೦ ಬಾರಿ ಕವಿಯ ಜನ್ಮಸ್ಥಳದ ಪ್ರಸ್ತಾಪವಿದೆ. ಅದರಲ್ಲಿ ೨೮ ಬಾರಿ 'ದೇವಪುರ' ಊರಿನ ಉಲ್ಲೇಖವಿದೆ. ಒಮ್ಮೆಯೂ 'ದೇವನೂರು' ಉಲ್ಲೇಖವಿಲ್ಲ. ೫೮ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಸಾಹಿತ್ಯ ನಿರ್ಣಾಯಕ ಸ್ಥಳವಲ್ಲವೆ? ದೇವನೂರಿನವನು ಎಂಬ ವಾದ ಮಂಡಿಸುವವರು ಗ್ರಂಥದಲ್ಲಿ ಒಂದು ಸಲ 'ದೇವನೂರ' ಶಬ್ದವನ್ನು ತೋರಿಸಲಿ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಿಗೆ ಸೂಕ್ತ ಉತ್ತರವನ್ನು ಅವರ ಪತ್ರಕ್ಕೆ ಕೊಟ್ಟಿದೆ. ಶ್ರೀಮತಿ ರಾಣಿ ಸತೀಶರ ಉತ್ತರವೂ ಮಾನ್ಯ ಎಂ.ಎಲ್.ಸಿ. ಶ್ರೀ ಎಂ.ಆರ್. ತಂಗಾ ಅವರಿಗೆ ಬಂದಿದೆ. ವಸ್ತುವಿನ ಪುನಃ ಪರಿಶೀಲನೆ ಮಾಡುವುದಾಗಿ ತಿಳಿಸಿದ್ದಾರೆ. ಮಹಾಕವಿ ಲಕ್ಷ್ಮೀಶನು ಹೇಳಿರುವ ಪದ್ಯ ಹೀಗಿದೆ :

ವಿದ್ವತ್ಸಭಾವಲಯಮರಿಯೆ ವಿರಚಿಸಿದಂಭ
ರಧ್ವಾಜ ಗೋತ್ರಭವಣ್ಣಮಾಂಕನ ಸುತಂ
ಸದ್ವಿನುತ ಕರ್ಣಾಟಕ ಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು
ಹೃದ್ವನಜದೊಳ್ ದೇವಪುರದ ಲಕ್ಷ್ಮೀಶನಪ
ದದ್ವಯವನಾವಗಂ ಧ್ಯಾನಿಸುವರಡಿಗಳಂ
ಸದ್ವಿನಯದಿಂ ಭಜಿಪಬಲ್ಪಿಂದೆ ವಿಮಲ ಜೈಮಿನಿ ಭಾರತದ ಕಥೆಯನು ॥

ಪೂರ್ಣಪದ್ಯವನ್ನು ಉಲ್ಲೇಖಿಸಿ ಶ್ರೀಪಾಂಡುರಂಗ ಅವರು ವಿಮರ್ಶೆ ಮಾಡಲಿ. ಈಗಂತೂ ಮಾಡಿಲ್ಲ.

ದಿ. ಗೋವಿಂದ ಪೈ ಕ್ಷೇತ್ರಕಾರ್ಯ ಮಾಡದೆ ತಮ್ಮ ಸ್ನೇಹಿತ ಮಾಸ್ತಿ ಅವರ ಇಚ್ಛೆಯಂತೆ ಲೇಖನಗಳನ್ನು ಬರೆದರು. ಬೇಂದ್ರೆ ತಂದೆ ಮಕ್ಕಳು ಮಾಸ್ತಿ ಅವರ ಕೃಪಾ ಛತ್ರದಲ್ಲಿ ಬಾಳಿ ಬದುಕಿದವರು. ಅವರ ಇಚ್ಛೆಗೆ ಅನುಸಾರವಾಗಿ ಬರೆದರು.

ಕಲಬುರ್ಗಿ ಕನ್ನಡ ಸಂಘ ದ. ರಾ. ಬೇಂದ್ರೆ ಅವರ ಪುಸ್ತಕವನ್ನು ಅದು ಮೂಲ ಗ್ರಂಥಕ್ಕೆ ವಿರೋಧವಾಗಿದೆಯೆಂದು ಪ್ರಕಟಿಸಲೂ ಇಲ್ಲ. ದಿ. ಕಪಟರಾಳ ಕೃಷ್ಣರಾಯರು ದಿ. ತವಗಭೀಮಸೇನರಾಯರು ಈಗ ಈ ಸತ್ಯವನ್ನು ಹೇಳಲು ಬದುಕಿಲ್ಲ! ಇದು ನಡೆದ ಘಟನೆ. ಕನ್ನಡ ಜೈಮಿನಿ ಭಾರತದಲ್ಲಿ ಕವಿಯು ತನ್ನ ಆರಾಧ್ಯ ದೇವತೆಯ ಸ್ಥಳವನ್ನು ಹೀಗೆ ತಿಳಿಸಿದ್ದಾನೆ.

| | |
|---|---|
| ದೇವಪುರ | ೨೮ ಸಲ |
| ಸುರಪುರ | ೪ ಸಲ |
| ದಿವಿಜಪುರ | ೧ ಸಲ |
| ಅನಿಮಿಷನಗರ | ೧ ಸಲ |
| ದೇವಗ್ರಾಮ | ೧ ಸಲ |
| ದೇವನಗರಿ | ೨ ಸಲ |
| ಅಮರ ನಗರಿ | ೧ ಸಲ |
| ಸುರನಗರ | ೧ ಸಲ |
| ಅಮರಪುರ | ೧ ಸಲ |
| ಒಟ್ಟು | ೪೦ ಸಲ |

ನಾಲ್ಕು ಸಲ ಪ್ರಸ್ತಾಪವಿರುವ 'ಸುರಪುರ' ಊರಿನವರು ದೇವಪುರವೆ ಕವಿಯ ಜನ್ಮಸ್ಥಳ ಎಂದು ಒಪ್ಪಿಕೊಳ್ಳುತ್ತಿರುವಾಗ ಒಮ್ಮೆಯೂ ಬರದ ದೇವನೂರಿನ ಪಕ್ಷದವರು ಅದನ್ನೇಕೆ ಒಪ್ಪಿಕೊಳ್ಳಬಾರದು? ಅಂಕಿತವನ್ನು ತಿರುಚಿದಾಕ್ಷಣ ಬಸವಣ್ಣನವರ ವಚನಗಳು ಹೇಗೆ ಬೇರೆಯವರ ವಚನಗಳು ಆಗುವುದಿಲ್ಲವೊ ಹಾಗೆಯೆ ಒಂದು ಊರಿನಲ್ಲಿ ಒಂದು ಮೂರ್ತಿ ಪ್ರತಿಷ್ಠಾಪಿಸಿ ಸ್ಮಾರಕ ನಿರ್ಮಿಸಿದಾಕ್ಷಣ ಆ ಸ್ಥಳ ಕವಿಯ ಊರಾಗುವುದಿಲ್ಲ. ಕವಿಯು ಕಾವ್ಯದಲ್ಲಿ ಹೇಳಿರುವುದು 'ದೇವಪುರ', ಅಂತೆಯೆ ಮಹಾಕವಿ ಲಕ್ಷ್ಮೀಶನ ಜನ್ಮಸ್ಥಳ ದೇವಪುರ; ಅದು ಇನ್ನೊಂದಲ್ಲ.

## ಅನುಬಂಧ –II
## ಮಹಾಕವಿ ಲಕ್ಷ್ಮೀಶನ ಸ್ಥಳ ದೇವಪುರ

ಮಾನ್ಯರೆ,

ನಾನು ಬರೆದ ಪತ್ರ ಡಾ. ಡಿ. ಆರ್. ಪಾಂಡುರಂಗ ಹಾಗೂ ಇತರರು ಬರೆದ ಪತ್ರಗಳು ಅಚ್ಚಾಗಿವೆ–ಅಕ್ಷರ ಆಗಿವೆ. ನಾನು ನಿರಾಧಾರವಾಗಿ ಲಕ್ಷ್ಮೀಶನ ಸ್ಥಳ ದೇವಪುರ ಎಂದು ಪ್ರತಿಪಾದಿಸಿದ್ದೇನೆಂದು ಬರೆದ ಶ್ರೀಪಾಂಡುರಂಗ ಅವರು ಈಗ ಸಾಕಷ್ಟು ಆಧಾರಗಳಿಂದ ಬರೆದಿರುವೆನೆಂದು ಒಪ್ಪಿಕೊಂಡಿದ್ದಾರೆ; ಅದಕ್ಕೆ ಕೃತಜ್ಞತೆಗಳು (ಪ್ರವಾ. ಡಿಸೆಂಬರ್ ೧೧). ಈಗಲೂ ಶ್ರೀಯುತರು ಕನ್ನಡ ಜೈಮಿನಿಭಾರತದ ಕರ್ತೃ 'ದೇವಪುರ' ಎಂಬ ಊರಿನವನು ಎಂದು ಒಪ್ಪಿಕೊಂಡಿಲ್ಲ. ದೇವತೆಗಳು ಇದ್ದುದಕ್ಕೆ ದೇವನೂರಿಗೆ ದೇವಪುರ ಎಂದು ಹೆಸರು ಬಂದಿದೆ. ಇತ್ಯಾದಿ ಬರೆದಿದ್ದಾರೆ. ಯಾವುದೇ ಊರಿಗೆ

ಅಲ್ಲಿ ದೇವಾಲಯ ಇದ್ದರೇನೆ ಅದಕ್ಕೆ 'ದೇವ' ಶಬ್ದ ಜೋಡಿಸಿ ಹೇಳುತ್ತಾರೆ. ಆದುದರಿಂದ ಕಲಬುರ್ಗಿ ಜಿಲ್ಲೆಯ 'ದೇವಪುರ' ಊರಿನಲ್ಲೂ ಒಂದೊಮ್ಮೆ ದೇವಾಲಯವೇಕೆ ಹಲವು ದೇವಾಲಯಗಳಿದ್ದವು. ಅಂತೆಯೆ ಅದಕ್ಕೆ 'ದೇವಪುರ' ಎಂದು ಹೆಸರು ಬಂದಿತು. ನಮ್ಮ ಪ್ರಾಚೀನ ಕವಿಗಳು ತಮ್ಮ ಕೃತಿಗಳ ಆದ್ಯಂತಗಳಲ್ಲಿ ತಮ್ಮ ವಿಷಯವನ್ನೂ ಚಾರಿತ್ರಿಕ ಸಂಗತಿಗಳನ್ನೂ ಕೊಡುವುದು ಸಂಪ್ರದಾಯ –ರೂಢಿಗತ (ದಿ.ಜೆ.ಎಫ್.ಫ್ಲೀಟ್ ಭಾ.ಶಾ. ಪರಿಚಯ ಹಾಗೂ ಪ್ರೊ. ಡಿ. ಎಲ್. ಎನ್. ಕ.ಗ್ರ ಸಂಪಾದನೆ) ಕ. ಜೈ.ಭಾ. ಕೃತಿಕಾರ ತನ್ನ ಕೃತಿಯ ನಾಂದೀಪದ್ಯವನ್ನು ಹೀಗೆ ಬರೆದಿದ್ದಾನೆ :

ಶ್ರೀ ವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂಮೇರೆವರಿಯೆ
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮೆಮಗೀಯಲಿ ॥

(ಕಜೈಭಾ. ೧–೧) ನಾನು ಕವಿಯ ಸ್ಥಳ 'ದೇವಪುರ' ಎಂದು ಹೇಳಿದ್ದರೂ 'ಸುರಪುರ' ಇದಕ್ಕೇಕೆ ಪರಿವರ್ತಿಸಿದರೊ ಗೊತ್ತಿಲ್ಲ. ಕವಿಯು ತನ್ನ ಊರು 'ದೇವಪುರ' ಎಂದು ಹೇಳಿದ್ದಾನೆ. ಇದ್ದುದನ್ನು ಇದ್ದಂತೆ 'ದೇವಪುರ' ಎಂದು ಹೇಳೋಣ. ಇಲ್ಲದ್ದನ್ನು ಇದೆ ಎಂದು ಹೇಳುವುದು ಉಚಿತವಾದ ರೀತಿಯ ಸಂಶೋಧನೆಯೆ ಅಲ್ಲ. "ದೇಶೇಗೋದಾವರೀತೀರೇ ದಂಡಕಾರಣ್ಯೇ" ಎಂದು ಇಂದಿಗೂ ಹೇಳುತ್ತಾರೆ. ಆ 'ದಂಡಕಾರಣ್ಯ' ಇಂದು ಇದೆಯೆ? ಕಾಲಕಾಲಕ್ಕೆ ಪರಿಸರ ವ್ಯತ್ಯಾಸ ಆಗುತ್ತಿರುತ್ತದೆ. ಇಂದು ಇವೆಯೆ ಎಂದು ಕೇಳುವುದು ನ್ಯಾಯವಲ್ಲ. ಹಿಂದೆ ಅವರು ಹೇಳಿದ ಪರಿಸರ ಅಲ್ಲಿ ಇದ್ದಿತು, ಶಾಸನಗಳು ಇವೆ, ಕಣ್ಣು ತೆರೆದು ಪೂರ್ವಗ್ರಹ ಪೀಡೆಯಿಂದ ದೂರ ಸರಿದು ಅಧ್ಯಯನ ಮಾಡಲಿ; ಆಗ ಸತ್ಯ ಗೋಚರವಾಗುತ್ತದೆ. ಈ 'ದೇವಪುರ' ಎಲ್ಲಿದೆ ಎಂದು ಪ್ರಶ್ನಿಸಿದರೆ ಅದು ಛಾಯಾದೇವಿಯ ದೇವಾಲಯದ –ಪೆರ್ದೊರೆಯ (ಕೃಷ್ಣಾ ನದೀ)–ಪಕ್ಕದಲ್ಲಿದೆ ಎಂದು ಕಾವ್ಯದಿಂದಲೇ ಗೊತ್ತಾಗುತ್ತದೆ; ಮೂಲದಲ್ಲಿ ಇಲ್ಲದ ಛಾಯಾದೇವೀ ಸ್ತುತಿ :

೧. ತಾಯೆ ಪಾರ್ವತಿ ಪರಮಕಲ್ಯಾಣಿ ಶಂಕರ
ಪ್ರೀಯೆ ಸರ್ವೇಶ್ವರಿ ಜಗನ್ಮಾತೆ ಸನ್ನುತ
ಛಾಯೆ ಸಾವಿತ್ರಿ . . . . ಕ ಜೈ ಭಾ ೩೧–೨೨

೨. ಮೂಲ ಸಂಸ್ಕೃತ ಜೈಮಿನಿಭಾರತದಲ್ಲಿ ಇಲ್ಲದ ಕೃಷ್ಣಾನದಿಯನ್ನು ಹೇಳಿರುವುದು ಗಮನಾರ್ಹ :

ಎಲ್ಲಿಯುಂ ಪರಿವ ಪೆರ್ದೊರೆಯಿಂದೆ . . .
. . .. [ಆ]ನಾಡಸಿರಿ ಮೆರೆದುದು ॥

–ಕಜೈಭಾ. ೩–೨

ಲಕ್ಷ್ಮೀಶನ ಕಾಲದ ಬಗೆಗೆ ಕೆಲ ವಿದ್ವಾಂಸರಿಗೆ ಸಂದೇಹ ಬಂದಿದೆ. ಕೃತಿಯ ಕುರಿತು ಆಳವಾದ ಅಧ್ಯಯನ ಮಾಡಿದವರಿಗೆ ಸಂದೇಹ ಬರದು. ಏಕೆಂದರೆ ಕ್ರಿ.ಶ. ೧೧೩೭-೧೭೦೦ರ ಮಧ್ಯೆ ತೂಗುತ್ತಿದೆ-ಅದು. ಷಟ್ಪದಿಯ ಬರವಣಿಗೆಯು ಅಲ್ಲಮಪ್ರಭುಗಳ ಕಾಲದಲ್ಲಿ ಇದ್ದಿತು. (ಸಂಶೋಧನೆ: ಡಾ. ಎಂ. ಚಿದಾನಂದಮೂರ್ತಿ ಅಭಿನಂದನ ಗ್ರಂಥ ಪು. ೧೯೭-೨೦೦) ಕಾರಣ ಷಟ್ಪದಿಯ ರಚನೆ ಕ್ರಿ.ಶ. ೧೩ನೇ ಶತಮಾನದಿಂದ ಈಚೆಯೆ ಆಗಬೇಕಿಲ್ಲ. ನಾನು ದೇವನೂರನ್ನೂ ಅದರ ಪರಿಸರವನ್ನೂ ಸಾಕಷ್ಟು ಅಧ್ಯಯನ ಮಾಡಿದ್ದೇನೆ.

ಸತ್ಯ ಸಿಹಿ ಆಗಿರುವುದಿಲ್ಲ (Truth is bitter)ದಿ. ಮಾಸ್ತಿ, ದಿ. ಗೋವಿಂದ ಪೈ ಹಾಗೂ ಬೇಂದ್ರೆ ತಂದೆ ಮಕ್ಕಳ ಬಗ್ಗೆ ನಾನು ಬರೆದಿರುವುದು ನೂರಕ್ಕೆ ನೂರು ಅಪ್ಪಟ ಸತ್ಯ. ಅದು ಕಹಿ ಆಗಿದ್ದರೆ ನುಂಗಬೇಕಾದವರು ಅಸಹ್ಯ ಮುಖಮಾಡಿಕೊಳ್ಳಬೇಕಾಗುತ್ತದೆ! ನಾನು ಯಾರನ್ನು ಓಲೈಸಿ ಇದುವರೆಗೆ ಏನನ್ನು ಪಡೆದಿದ್ದೇನೆ? ಜೆ.ಆರ್. ಲಕ್ಷ್ಮಣರಾಯರೇ ಹೇಳಲಿ (ವಾವಾ. ಡಿಸೆಂಬರ್ ೧೧). ಸತ್ಯ ಸಂಶೋಧನೆ ಮಾಡಿ ಕೊಡುವುದೊಂದೆ ನನ್ನ ಕಾಯಕ. ಆ ಕೆಲಸವನ್ನು ಇಂದಿಗೂ ಮಾಡಿದ್ದೇನೆ. ಅದು ಪಂಪ ಇರಬಹುದು, ಕುಮಾರ ವ್ಯಾಸ ಇರಬಹುದು ಮತ್ತು ಲಕ್ಷ್ಮೀಶ ಇರಬಹುದು. ಅಥವಾ ಮತ್ತೆ ಬೇರೆ ಸಂಶೋಧನೆಗಳಿರಬಹುದು. ಕವಿಗಳು ಏನು ಹೇಳಿದ್ದಾರೊ ಆ ಸಂಗತಿಗಳನ್ನು ತಿರುಚುವುದು ಬೇಡ. ಗಟ್ಟಗೆ (ಘಟಪ್ರಭಾ) ಹಾಗೂ ಪೆರ್ದೊರೆಯ (ಕೃಷ್ಣಾ) ಮಧ್ಯದಲ್ಲಿರುವ ಜಮಖಂಡಿ ೭೦ರ ಮುಧೋಳದಲ್ಲಿ ಅಲ್ಲಿ ಏನೂ ಇಲ್ಲದಿದ್ದರೂ ದಿ.ಬಿ.ಎಂ.ಶ್ರೀ ರನ್ನನಿಗಾಗಿ ಆ ನೆಲದ ಮಣ್ಣಿಗೆ ಹೇಗೆ ಬಾಗಿ ನಮಿಸಿದರೊ ಹಾಗೆ ಇಂದು ದೇವಪುರದಲ್ಲಿ ಏನೂ ಪ್ರಾಚೀನ ಅವಶೇಷಗಳು ಇಲ್ಲದಿದ್ದರೂ ಕವಿ ಲಕ್ಷ್ಮೀಶನ ಸ್ಥಳ ಎಂದು ದೇವಪುರ ಸ್ಥಳಕ್ಕೆ ಕನ್ನಡ ಜನತೆ ಮನ್ನಣೆ ನೀಡಲಿ ಎಂಬುದೊಂದೆ ಕಳಕಳಿ. ಕಜೈಭಾ. ಗ್ರಂಥಕ್ಕೆ ವಿರೋಧವಾಗಿ ಹೇಳುವುದು ಬೇಡ. ಆದುದರಿಂದ ಕವಿ ಲಕ್ಷ್ಮೀಶನ ಸ್ಥಳ : ದೇವಪುರ ಮತ್ತು ಆತ ಭಾಗವತ ಕವಿ.

* * * *

ದೇವಪುರದ ಸಾಧನಾಸಾಮಗ್ರಿಯ ಮೇಲೆ ಆದ ಅತ್ಯಾಚಾರದ ಸಂಗತಿಯನ್ನೂ ಸಂಶೋಧನೆಯಲ್ಲಿ ಕಡೆಗಣಿಸುವಂತಿಲ್ಲ. ಅವೆಂದರೆ :

೧. ದೇವಪುರದಲ್ಲಿ ತೇದಿಯ ವಿವರಗಳನ್ನುಳ್ಳ ಕನ್ನಡ ಜೈಮಿನಿ ಭಾರತದ ಹಸ್ತಪ್ರತಿಯೊಂದಿದ್ದಿತು. ಅದನ್ನು ಸಂರಕ್ಷಿಸಿಡಲು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಸಂಸ್ಥೆಗೆ ದಾನವಾಗಿತ್ತರು. ಹಸ್ತಪ್ರತಿಯನ್ನು ತೆಗೆದುಕೊಂಡು ಹೋದ ದಿ.ಬಿ.ಎಂ. ಶ್ರೀ ಅವರು ಅದನ್ನು ಕಸಾಪ ಬೆಂಗಳೂರಿನ ಹಸ್ತಪ್ರತಿಯ ಭಂಡಾರದಲ್ಲಿ ಇರಿಸಿದರು. ಇದಕ್ಕೆ ಅಲ್ಲಿನ ರಿಜಿಸ್ಟರದಲ್ಲಿ ದಾಖಲೆ ಇದೆ. ಆದರೆ ಇಂದು ಆ ಹಸ್ತಪ್ರತಿ ಅಭ್ಯಾಸಕ್ಕೆ ಉಪಲಬ್ಧವಿಲ್ಲ. ಅದನ್ನು ಬಿ.ಎಂ.ಶ್ರೀ. ಮುಖಾಂತರ ಅಭ್ಯಾಸಕ್ಕೆ ದಿ.ದ.ರಾ. ಬೇಂದ್ರೆಯವರು ಒಯ್ದರೆಂದು ಒಂದು ವದಂತಿ. ಯಾರು ಒಯ್ದಿದ್ದಾರೊ ಗೊತ್ತಿಲ್ಲ. ಸದ್ಯ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅದು ಇಲ್ಲವೆಂದು (ನಮಗೆ ೧೯೭೪ರಲ್ಲಿ) ಉತ್ತರ ಬಂದಿತು.

೨. ನಾನು ನೋಡಿದ ಸುಮಾರು ೩೫ ಹಸ್ತಪ್ರತಿಗಳಲ್ಲಿ ನಾಂದೀಪದ್ಯದಲ್ಲಿ 'ಚಂದ್ರ' ಎಂಬ ಶಬ್ದ ಇದೆ : ಆ ಪದ್ಯ

ಶ್ರೀ ವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚ್ಚನಿಂ ಮೇರೆವರಿಯೆ
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮೆಮಗೀಯಲಿ ॥

ದಿ. ಶ್ರೀ ಮಾಸ್ತಿಯವರು ಪ್ರಕಟಿಸಿದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಈ ಪದ್ಯವನ್ನು ಹೀಗೆ ಉಲ್ಲೇಖಿಸಿದ್ದಾರೆ. (ಪುಸ್ತಕ : ಕವಿ ಲಕ್ಷ್ಮೀಶ; ಚಿ.ಕ. ಸಂಘ ಪ್ರಕಟಣೆ)

ಶ್ರೀ ವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರದೊಡೆಯ ಲಕ್ಷ್ಮೀರಮಣನಾಸ್ಯಮಾನಂದಮಂನಮಗೀಯಲಿ ॥

ದಿ. ನಾ. ಶ್ರೀ ರಾಜಪುರೋಹಿತರು ಬಿಜಾಪುರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ 'ಚಂದ್ರ' ದೊರೆಯನ್ನು ಗುರುತಿಸಿದರೆ ಈ ಕಾವ್ಯದ ಕಾಲವನ್ನು ಗುರುತಿಸಲು ಸಾಧ್ಯವೆಂದು ಹೇಳಿದ್ದರು. ಅದು ಮಾಸ್ತಿಯವರ ಬರವಣಿಗೆಯಲ್ಲಿ ಕಿತ್ತೊಗೆಯಲಾಯಿತು! ಕನ್ನಡ ಜನತೆ ಇದೆಲ್ಲವನ್ನೂ ಗಮನಿಸಲಿ, ದೇವಪುರ ಸ್ಥಳಕ್ಕೆ ನ್ಯಾಯ ದೊರಕಿಸಿಕೊಡಲಿ. 'ಚಂದ್ರ' ಇಲ್ಲದ ಈ ಪದ್ಯ ಅರ್ಥವಿಲ್ಲದ ಕವಿತೆ.

(ಈ ಬರವಣಿಗೆಗೆ ಕಾರಣರಾದ ಉದಯೋನ್ಮುಖ ಯುವ ಬರಹಗಾರರ ಬಳಗದ ಅಧ್ಯಕ್ಷ ಶ್ರೀ ವೀರಭದ್ರ ಸಿಂಪಿ, ಸರ್ವಶ್ರೀ ಸಗರಕೃಷ್ಣಾಚಾರ, ಎ.ಕೃಷ್ಣ ಸುರಪುರ, ಜಿ.ಆರ್. ಕುಲಕರ್ಣಿ ಡಿ. ಎನ್.ಅಕ್ಕಿ ಹಾಗೂ ಕಲಬುರ್ಗಿ ಜಿಲ್ಲೆಯ ನೂರಾರು ಜನಸಾಹಿತಿ ಬಂದುಗಳಿಗೆ ಋಣಿಯಾಗಿದ್ದೇನೆ.)

### ಅಡಿಟಿಪ್ಪಣಿಗಳು

೧. ಅಜಿತ ತೀರ್ಥಂಕರ ಪುರಾಣಂ (ಸಂ : ಬಿ.ಎಸ್. ಸಣ್ಣಯ್ಯ ಹಾಗೂ ರಾಮೇಗೌಡ) ಆ.೧೨. ಪದ್ಯಗಳು : ೪೬,೪೭, ಪು. ೨೭೩

೨. ಅದೇ ಪುಸ್ತಕ, ಟಿಪ್ಪಣಿಗಳನ್ನೂ (ಪು. ೩೦೭) ನೋಡಿ. ರನ್ನನ ಈ ಪದ್ಯಗಳು 'ಅಜಿತ ತೀರ್ಥಕರ ಪುರಾಣಂ' ಗ್ರಂಥದ ಎಲ್ಲ ವಿವಿಧ ಆವೃತ್ತಿಗಳಲ್ಲೂ (Editions) ಇವೆ.

೩. 'ಬೆಳುದಿಂಗಳಂ' ಎಂದು ಹಲವು ಪ್ರತಿಗಳಲ್ಲಿದೆ. ದುರ್ದೈವದ ಸಂಗತಿ ಎಂದರೆ ಇಡೀ ಕರ್ನಾಟಕದಲ್ಲಿ ದೊರೆಯುತ್ತಿರುವ ಹಸ್ತಪ್ರತಿಗಳನ್ನು ಆಧರಿಸಿ ಜೈಮಿನಿಭಾರತದ ಉತ್ತಮ ಪ್ರತಿಯು ಸಂಪಾದಿಸಿ ಹೊರ ಬಂದಿಲ್ಲ. 'ಬೆಳ್ದಿಂಗಳಂ' ಎಂಬ ಪಾಠವನ್ನು ನಾನು ಮೈಸೂರು ವಿ. ವಿ. ಪ್ರಕಟಿಸಿರುವ 'ಕನ್ನಡ ಕೈಪಿಡಿ' ಗ್ರಂಥದಿಂದ ಎತ್ತಿಕೊಂಡಿರುವೆ. ಕ.ಕೈಪು.೨೮೦ (೧೯೭೫).

೪. ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯು ಪ್ರಕಟಿಸಿದ 'ಕನ್ನಡ ಜೈಮಿನಿ ಭಾರತ' ಸಂಧಿ : ೧–೧ (೧೯೫೬) ಇದೇ ಗ್ರಂಥವನ್ನು ಈ ಲೇಖನದ ತುಂಬ ಬಳಸಿದ್ದೇನೆ.

೫. ಹಿಂದೂಗಳು ತಾವು ಮುಂದಿಡುವ ಚಾರಿತ್ರಿಕ ವಿವರಗಳೊಡನೆ ಕಾಲವನ್ನು ಕೊಡುವುದು ಯೋಗ್ಯವೆಂದು ಭಾವಿಸಿರುವುದು ತಮ್ಮ ಸಾಹಿತ್ಯ ಕೃತಿಗಳ ಆದ್ಯಂತಗಳಲ್ಲಿ ಮಾತ್ರ–ಜೆ. ಎಫ್. ಫ್ಲೀಟ್ "ಭಾರತೀಯ ಶಾಸನ ಶಾಸ್ತ್ರ ಪರಿಚಯ" (ಅನು. ಡಾ. ಸಿ.ಪಿ.ಕೆ.) ಪು. ೪೧ (೧೯೭೦).

೬ ಗ್ರಂಥ ಸಂಪಾದನಾಶಾಸ್ತ್ರಗಳೂ ಈ ಮೇಲಿನ ಮಾತನ್ನೇ ಅನುಮೋದಿಸುತ್ತವೆ. ಪ್ರೊ. ಡಿ.ಎಲ್.ಎನ್; ಡಾ. ಎಂ.ಎಂ. ಕಲಬುರ್ಗಿ ಮತ್ತು ಶ್ರೀ ಸೀತಾರಾಮ ಜಾಗೀರ್‌ದಾರ್ ಇವರಲ್ಲಿ ಯಾರದಾದರೂ ಪುಸ್ತಕವನ್ನು ನೋಡಬಹುದು.

೭. ದಿ. ನಾಗಪ್ಪ ಮಾಸ್ತರರು ಮನಸೋಯಿಚ್ಛೆಯಿಂದ ತಿದ್ದಿ ಪ್ರಕಟಿಸಿರುವ 'ಸಟೀಕು' ಕನ್ನಡ ಜೈಮಿನಿ ಭಾರತದಲ್ಲಿ 'ದೇವನೂರು' ಇದ್ದುದರ ಅರಿವು ನನಗಿದೆ. ಸಂಧಿ : ೨೬

೮. ಶ್ರೀ ಜೈಮಿನಿಯಾಶ್ವಮೇಧಪರ್ವ (ಲೇ : ಪಂಡಿತ ರಾಮಾಧಾರ ಶುಕ್ಲ) ಪು. ೧೫ (ಗೀತಾ ಪ್ರೆಸ್, ಗೋರಖಪುರ).

೯. ಕ್ಷೇತ್ರ ಕಾರ್ಯವನ್ನು ಸರಿಯಾಗಿ ಮಾಡದೆ ಬರೆದಿರುವ ಹಿಂದಿನವರ ಕೃತಿಗಳನ್ನು ಯಾರೂ –ನಾಡೂ–ಮನ್ನಿಸಬೇಕಿಲ್ಲ. ಅವುಗಳಲ್ಲಿ ಸತ್ಯವೇ ಸತ್ತಿದೆ.

* ಜಯತು ಜಯತು ದೇವೋ ದೇವಕೀನಂದನೋಯಂ
ಜಯತುಜಯತು ಕೃಷ್ಣೋ ವಿಷ್ಣುವಂಶ ಪ್ರದೀಪಃ ।
ಜಯತು ಜಯತು ಮೇಘಶ್ಯಾಮಲಃ ಕೋಮಲಾಙ್ಗೋ
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ ।

–ಕುಲಶೇಖರ 'ಮುಕುಂದಮಾಲಾ'

೧೦. Early History of The Deccan (Ed. Dr. Yazdami) vide the description of the River Krishna.

೧೧. ಛಾಯಾದೇವಿ ಇಲ್ಲಿನ ಜಾನಪದ ದೇವತೆ. ಪ್ರತಿ ವರ್ಷ ನಡೆಯುವ ಜಾತ್ರೆಗೆ ನೂರಾರು ಜನ ಹೋಗುತ್ತಾರೆ. ನಾರಾಯಣಪುರದ ಬಳಿ ಕೃಷ್ಣಾನದಿಗೆ ಅಣೆಕಟ್ಟು ಆದ ಮೇಲೆ ಈ ದೇವಾಲಯಕ್ಕೆ ಹೋಗಲು ದಾರಿ ಸುಗಮವಾಗಿದೆ. ಆದರೆ ಪ್ರಾಚೀನ ಕಾಡೆಲ್ಲ ನಷ್ಟವಾಗಿ ಹೋಗಿದೆ.

೧೨. ಶಬ್ದಮಣಿದರ್ಪಣಂ (ಸಂ. ಪ್ರೊ. ಡಿ. ಎಲ್. ಎನ್.) ಸೂತ್ರ : ೩೦೪–ಪ್ರಯೋಗ, ಪು. ೩೩೮ (೧೯೬೮);

'ಕಪ್ರತಿ' ಅವಿಚಲಿತ ಲಕ್ಷ್ಯ ಲಕ್ಷಣ
ನವಿಕಲಕಲನತಿಸಮರ್ಥ ಶಬ್ದಾರ್ಥವಾಗ್ವಿಲಾಸಂ ।
ಕವಿಪತಿಕೇಶವದೇವಂ
[ಭುವಿಯೊಳ್‌ವಿಧು] ಯದುನೃಪಾಲಕಟಕಾಚಾರ್ಯಂ ॥ ಪು. ೨೭೯

೧೩. (a)ಎಪಿ. ಕ.ಸಂ.೯ (೧೯೯೦) ಶಾಸನ ಸಂಖ್ಯೆ. ಬೇಲೂರು–೧, ಪು.೧
ಜಿಷ್ಣುರ್ವಿಷ್ಣು ಮಹೀಪಾಳಃ ಪಾಳಿತಾಖಿಳಭೂತಳಃ
ದೇವದೇವೇಶ ವಿಜಯನಾರಾಯಣಮಚೀಕರತ್ ।।

(b) ಅದೇ. ಸಂಪುಟ ಶಾಸನ ಸಂಖ್ಯೆ: ಬೇಲೂರು–೯೪, ಪು. ೫೦
ಶಾಂತಿ ಕೃತ್ಸರ್ವ್ವಭೂತಾನಾಂ ಪ್ರತಿಷ್ಠಾ ವಿಷ್ಣುಕಾಂತಯಾ
ಚೆಂನಕೇಶವದೇವಸ್ಯ ಶಾಂತಿದೇವ್ಯಾ ಕೃತೋತ್ತಮಾ ॥

೧೪. ಭಾರತೀಯ ಮೂರ್ತಿಶಾಸ್ತ್ರ (Dr. N. P. Joshi, Director, State Museum, Lucknow) ಮರಾಠೀಗ್ರಂಥ, ಪು. ೯೬–೯೭

೧೫. ದೇವನೂರಿನ ಲಕ್ಷ್ಮೀರಮಣ ಸ್ವಾಮಿಯ ಫೋಟೋ ನೋಡಿ.

೧೬. (a) ದಿ. ಟಿ.ಎಸ್. ವೆಂಕಣ್ಣಯ್ಯನವರ ಲೇಖನ : ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಸಂ. ೫, ಪು.೧–೧೨

(b) ದಿ. ಎಂ.ಆರ್. ಶ್ರೀ ಅವರ ಲೇಖನಗಳ ಸಮಗ್ರ ಸಂಪುಟ

(c) ದಿ. ನಾ. ಶ್ರೀ ರಾಜಪುರೋಹಿತ, ಅಧ್ಯಕ್ಷ ಭಾಷಣ, ಬಿಜಾಪುರ ಕನ್ನಡ ಸಾಹಿತ್ಯ ಸಮ್ಮೇಳನ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ. ಸಂ. ೭ ಪು ೨೪೨–೨೫೨

(d) ಕಲಬುರ್ಗಿಯಲ್ಲಿ ನಡೆದ ೫೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ದೇವಪುರ' ಎಂಬ ನಿರ್ಣಯವನ್ನು ಒಪ್ಪಲಾಗಿತ್ತು.

(e) ದಿ.ಎಫ್. ಕಿಟ್ಟೆಲ್ಲರು 'ದೇವಪುರ' ಎಂದೇ ಹೇಳಿದ್ದಾರೆ. ಆಗ ಈ ಗೊಂದಲ ಇದ್ದಿಲ್ಲ.

೧೭. ಕನ್ನಡ ಜೈಮಿನಿ ಭಾರತ (ಮೈ.ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಪ್ರಕಟಣೆ, ೧೯೫೬) ಪುಟಗಳು ಮುನ್ನುಡಿ xiv - xvii

೧೮. ಕಲಬುರ್ಗಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ 'ಶರಣಸರೋಜ', ಪು. ೧೦೪ ಇತ್ಯಾದಿ.

೧೯. ಕಾವ್ಯ ಮೀಮಾಂಸಕರ ವಿಶೇಷತಃ ದಂಡಿಯ ಮಾರ್ಗದಲ್ಲಿ ನಾಂದಿಯಲ್ಲಿ 'ಆಶೀ' ಮುಖೇನ ಕಾವ್ಯವನ್ನು ಆರಂಭಿಸಿದ್ದಾರೆ.

೨೦. ಮೇಲೆ ರನ್ನನು ಹೀಗೆ ಮಾಡಿರುವುದನ್ನು ಎಂದರೆ 'ಚಳುಕ್ಯನಾರಾಯಣ' ಎಂದು ಹೇಳಿದುದನ್ನು ನೋಡಿ.

೨೧. Ep. Ind. Vol. 12 ಏವೂರ ಶಾಸನ, ಕ್ರಿ.ಶ. ೧೦೭೭ (Ed. L.D. Barnet)

೨೨. Insp. Nanded District (Ed. Dr. S.H. Rith : and Dr. G.C. Shelta) P. 69.

■

**ಕರ್ನಾಟಕ ಲೋಚನ**
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೩. ವಚನ ಪಿತಾಮಹ ಫ.ಗು. ಹಳಕಟ್ಟಿ

**–ಸಂಗಮೇಶ ಬಾದವಾಡಗಿ***

ಉತ್ತರ ಕರ್ನಾಟಕದಲ್ಲಿ ಅವರ ಮನೆತನದ ಅಡ್ಡಹೆಸರಿನ ಮೇಲೆ ಅವರನ್ನು ಗುರುತಿಸುತ್ತಾರೆ, ಕರೆಯುತ್ತಾರೆ. ಹಾಗೆ ಆ ಭಾಗದ ಮಠಗಳಲ್ಲಿ, ಮನೆಗಳಲ್ಲಿ ಹುಳುಹತ್ತಿ ಸಂದೂಕು, ಪೆಠಾರಿಗಳಲ್ಲಿ ಹೂತುಹೋಗಿದ್ದ ರತ್ನಭಂಡಾರದಂತಿರುವ ವಚನ ಸಾಹಿತ್ಯದ ಹಳೆಕಟ್ಟುಗಳನ್ನು ಹೊರತೆಗೆದು ಪ್ರಪಂಚಕ್ಕೆ ಪರಿಚಯಿಸಿದ ಕೀರ್ತಿ ವಚನ ಪಿತಾಮಹ ಹಳಕಟ್ಟಿಯವರಿಗೆ ಸೇರುತ್ತದೆ. ಆದ್ದರಿಂದ ತಮ್ಮ ಮನೆತನಕ್ಕೆ ಬಂದ ಹಳಕಟ್ಟಿಯ ಅಡ್ಡಹೆಸರನ್ನು ಫಕೀರಪ್ಪನವರು ಕನ್ನಡದ ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡಿದ್ದಾರೆ. ಇವರ ಈ ಮಹಾಕಾರ್ಯದಿಂದ ಕಗ್ಗತ್ತಲೆಯಲ್ಲಿದ್ದ ಅಂದಿನ ದಿನಮಾನಗಳಲ್ಲಿ ಬೆಳಕಿಗೆ ಬಂದದ್ದು ಬಾಳಿಗೆ ಬೇಕಾದ ದೀಪದಂತಿರುವ ವಚನಗಳ ನುಡಿಗಟ್ಟುಗಳು.

**ದಯವಿಲ್ಲದ ಧರ್ಮ ಯಾವುದಯ್ಯ**
**ಕಾಯಕವೇ ಕೈಲಾಸ**
**ನುಡಿದರೆ ಮುತ್ತಿನ ಹಾರದಂತಿರಬೇಕು**
**ಹರಿವ ಹಾವಿಂಗಂಜೆ, ಉರಿವ ನಾಲಿಗೆಗಂಜೆ**
**ಪರಸ್ತ್ರೀ ಪರಧನನೆಂಬ ಜೂಜಿಂಗಂಜುವೆ**
**ಲೋಕದ ಡೊಂಕ ನೀವೇಕೆ ತಿದ್ದುವಿರಿ**
**ಬೆಟ್ಟದ ಮೇಲೊಂದು ಮನೆಯಮಾಡಿ**
**ಇಲ್ಲಿ ಸಲ್ಲುವವರು ಅಲ್ಲೂ ಸಲ್ಲುವವರಯ್ಯ**

ಹೀಗೆ ಮಾನವನ ಪುರೋಭಿವೃದ್ಧಿಗೆ ಕೈಹಿಡಿದು ಕರೆದೊಯ್ಯುವ ವಿಕಾರ ಮನಸ್ಸುಗಳನ್ನು ತಿದ್ದುವಂತಹ ವಚನ ಸಾರವನ್ನು ಹೊರತಂದದ್ದು, ಸರ್ವಕಾಲಿಕ

* ಮಾಜಿ ಗೌ॥ ಕಾರ್ಯದರ್ಶಿಗಳು, ಕನ್ನಡ ಸಾಹಿತ್ಯ ಪರಿಷತ್ತು; ೯೭೫, ೧೬ನೇ 'ಎ' ತಿರುವು, ಪಂಜಾಬ್ ನ್ಯಾಷನಲ್ ಬ್ಯಾಂಕ್ ಎದುರು; 'ಎ' ಸೆಕ್ಟರ್, ಯಲಹಂಕ ನ್ಯೂಟೌನ್, ಬೆಂಗಳೂರು – ೫೬೦೦೬೪. ಮೊ: ೯೭೩೧೧೬೩೫೩೧

ಸಾಹಿತ್ಯ ಉಣಬಡಿಸಿದವರು ಹಳಕಟ್ಟಿಯವರು. ಅದಕ್ಕಾಗಿ ಚನ್ನವೀರ ಕಣವಿಯವರು ಅವರ ಬಗ್ಗೆ ಹೀಗೆ ಬರೆಯುತ್ತಾರೆ.

'ಯಾವುದೋ ಅಮೃತಘಳಿಗೆ ನಿಮ್ಮ ದೃಷ್ಟಿಗೆ ಬಿತ್ತು. ಹೂತಿಟ್ಟ ಹೊನ್ನಗಣಿ ತೋಡಿದಿರಿ, ಹಗಲಿರುಳು ಮೈಮರೆತು ಹೊರದೆಗೆದು ಹೇರಿದಿರಿ ಬಂಡಿ ಬಂಡಿ ಚಿನ್ನದ ಅದಿರು, ಹಿಂಗಿತು ಹಸಿವು ನೀರಡಿಕೆ ತಾಳೆಗರಿ ಗರಿಯೊಡೆದು ಮರ ಮರವೇರಿ ಕುಕಿಲಿ ಬೆಳಕನೆಚ್ಚರಿಸಿದವು. ನಡುವೆ ಮೂಡಿತು ಶರಣರನುಭಾವ ಮಂಟಪದ ಮಾಣಿಕ್ಯ ದೀಪ್ತಿ, ನಡೆನುಡಿಯ ಜ್ಯೋರ್ತಿಲಿಂಗ, ತನ್ನರಿವೆ ಗುರು ಎಂಬ ವಚನ ಕೊಟ್ಟರಿ ನಿಮಗೋ? ಶೂನ್ಯ ಸಂಪಾದನೆ'

ಡಾ. ಹಳಕಟ್ಟಿಯವರು ಶರಣಸಾಹಿತ್ಯ, ಹರಿಹರನ ರಗಳೆಯನ್ನು ಹೊರತಂದರೂ ವಚನ ಸಾಹಿತ್ಯದ ವಚನಗಳ ಕಾವ್ಯಾಲಂಕಾರ ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿತ್ತು ಎಂಬುದನ್ನು ವಚನಕಾರರ ಮಾತಿನಿಂದಲೇ ಅಳೆಯಬಹುದು.

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ
ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮುವ್ವತ್ತಾರು ಸಾವಿರ
ಎಮ್ಮಯಗಳ ವಚನ ವಚನಕ್ಕೊಂದು
ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ
ಎಮ್ಮಕ್ಕ ನಾಗಾಯಿಯ ವಚನ ಮೂರು ಲಕ್ಷದ ತೊಂಬತ್ತಾರು ಸಾಸಿರ
ಮಡಿವಾಳಣ್ಣನ ವಚನ ಮೂರು ಕೋಟಿ ಮುನ್ನೂರು
ಹಡಪದಯ್ಯಗಳ ವಚನ ಹನ್ನೊಂದು ಸಾಸಿರ
ಮರುಳಸಿದ್ದನ ವಚನ ಅರವತ್ತೆಂಟು ಸಾಸಿರ
ಇಂತಪ್ಪ ವಚನದ ರಚನೆಯಾಗಿ ಬೆಟ್ಟ
ಹುಡಿಯಣ್ಣ ಹೊಯ್ಯದೇ ಮಾಬನೆ
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ
ಮಹಾದೇವ ಕಪಿಲ ಸಿದ್ದ ಮಲ್ಲಿಕಾರ್ಜುನೆ

ಎಮ್ಮ ವಚನಕ್ಕೊಂದು ಪಾರಾಯಣಕ್ಕೆ
ವ್ಯಾಸನದೊಂದು ಪುರಾಣ ಸಮಬಾರದಯ್ಯ
ಎಮ್ಮ ವಚನದ ನೂರೆಂಬರಧ್ಯಯನಕ್ಕೆ
ಶತರುದ್ರೀಯ ಯಾಗ ಸಮಬಾರದಯ್ಯ
ಎಮ್ಮ ವಚನಗಳ ಸಾಸಿರ ಪಾರಾಯಣಕ್ಕೆ
ಗಾಯತ್ರಿ ಲಕ್ಷ ಜಪಬಾರದಯ್ಯ
ಕಪಿಲಸಿದ್ದ ಮಲ್ಲಿಕಾರ್ಜುನಯ್ಯ

ಇಂತಹ ಅಪರೂಪದ ವಚನಗಳನ್ನು ಸಂಗ್ರಹಮಾಡಿ ಕನ್ನಡ ಕಾವ್ಯ ಪ್ರಪಂಚಕ್ಕೆ ಹೊಸದಾರಿ ತೋರಿಸಿದ ಡಾ. ಹಳಕಟ್ಟಿಯವರು ಜುಲೈ ೨ನೇ ತರೀಖು ೧೮೮೦

ಇಸವಿಯಲ್ಲಿ ಧಾರವಾಡದಲ್ಲಿ ಜನಿಸಿದರು. ಇವರ ತಂದೆ ಗುರುಬಸಪ್ಪ, ತಾಯಿ ದಾನಮ್ಮದೇವಿ. ಗುರುಬಸವಪ್ಪನವರು ಪ್ರಾಥಮಿಕ ಶಾಲೆ ಶಿಕ್ಷಕರಾಗಿದ್ದರೂ ಕೂಡ ಅಧ್ಯಯನಶೀಲತೆ, ಬರವಣಿಗೆ ಅವರ ಹವ್ಯಾಸವಾಗಿತ್ತು. ಇಂಗ್ಲೆಂಡಿನ ಇತಿಹಾಸ ಏಕನಾಥ ಸಾಧುಗಳ ಚರಿತ್ರೆಯಂಥ ಗ್ರಂಥ ರಚನೆ ಮಾಡುವುದರ ಜೊತೆಗೆ ಜ್ಞಾನ ಪ್ರಸಾರವನ್ನು ತಮ್ಮ ಜೀವನದ ಉದ್ದೇಶವೆಂದು ಭಾವಿಸಿ, ಎಲ್ಲೆಲ್ಲಿ ಸೇವೆ ಮಾಡಿದರೋ ಅಲ್ಲೆಲ್ಲಾ ಜ್ಞಾನದ ಬೀಜ ಬಿತ್ತಿದರು. ಅವರ ಈ ಕಾರ್ಯತತ್ಪರತೆ ಅವರ ಪುತ್ರರಾದ ಶ್ರೀ ಫ.ಗು. ಹಳಕಟ್ಟಿಯವರಿಗೆ ಬಳುವಳಿ. ಬಹುಶಃ ಬಡತನವೆಂಬುದು ಸಾಹಿತಿಗಳಿಗೆ, ಬರಹಗಾರರಿಗೆ ಅಂಟಿಕೊಂಡು ಬಂದ ಜಾಡ್ಯವಾದರೆ, ಹಳಕಟ್ಟಿಯವರಿಗೆ ಬಡತನ ಬಾಲ್ಯದ ಜೊತೆ ಜೊತೆಗೆ ಬಂತು. ತಾಯಿ ೩ ವರ್ಷದ ಮಗುವಿದ್ದಾಗಲೇ ತೀರಿಕೊಂಡದ್ದರಿಂದ, ಮಲತಾಯಿಯಿಂದ ಸಾಕಷ್ಟು ಕಹಿ ಅನುಭವಗಳನ್ನು ಹಂಚಿಕೊಂಡು ಬೆಳೆಯಬೇಕಾಯಿತು. ಎಳೆಯ ಮನಸ್ಸಿನಿಂದ ಹರೆಯದ ಮನಸ್ಸು ಬೆಳೆಯುವವರೆಗೆ ಕಹಿ ಹಾಗೂ ನೋವುಗಳು ಅವರನ್ನು ಬದುಕಿನಲ್ಲಿ ಸಾಕಷ್ಟು ಹುರಿಗೊಳಿಸಿದವು. ಜೊತೆಗೆ ಅಧ್ಯಯನದ ಕಡೆಗೆ ತಮ್ಮ ನೋವನ್ನು ಮರೆಯಲು ಸಾಗಿದರು.

ಹಳಕಟ್ಟಿಯವರು ೧೭ನೇ ವರ್ಷದಲ್ಲಿ ಪ್ರಥಮಶ್ರೇಣಿಯಲ್ಲಿ ಮೆಟ್ರಿಕ್ ಪರೀಕ್ಷೆ, ಮುಂಬಯಿಯ ಸೇಂಟಿಝುವಿಯರ್ ಕಾಲೇಜಿನಿಂದ ಬಿ.ಎ., ಎಲ್.ಎಲ್.ಬಿ. ಪರೀಕ್ಷೆ ಪಾಸು ಮಾಡಿದರು. ಅವರು ಮನಸ್ಸು ಮಾಡಿದ್ದರೆ ಆಗಿನ ಕಾಲದ ಸರ್ಕಾರದಲ್ಲಿ ದೊಡ್ಡ ಅಧಿಕಾರಿಯಾಗುವುದು ಬಹು ಕಷ್ಟದ ಕೆಲಸವೇನಾಗಿರಲಿಲ್ಲ. ಸ್ವಲ್ಪ ಕಾಲ ಸರಕಾರಿ ವಕೀಲರಾಗಿ ನೇಮಕಗೊಂಡರು. ಆ ವೃತ್ತಿಯನ್ನು ಮುಂದುವರೆಸಿದ್ದರೆ, ನ್ಯಾಯಧೀಶರೂ ಕೂಡ ಆಗಬಹುದಿತ್ತು. ಆದರೆ ಸ್ವಂತ ಬದುಕು ಕಟ್ಟಿಕೊಳ್ಳುವ ಆಕಾಂಕ್ಷೆ ಅವರಲ್ಲಿ ಎಳ್ಳಷ್ಟೂ ಇದ್ದಿರಲಿಲ್ಲ. ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು, ಸಮಾಜಕ್ಕೆ ಬೆಳಕು ನೀಡಬೇಕೆಂದರೆ ಮೈಸುಟ್ಟುಕೊಳ್ಳುವ ಹಣತೆಯಾಗಬೇಕೆನ್ನುವ ಸಮಾಜಮುಖಿ ಮನಸ್ಸು ಎಳೆಯುತ್ತಲೇ ಇತ್ತು.

ಓದುವಾಗಲೇ ಅವರ ಆಗಾಧ ಮನಸ್ಸಿಗೆ ಅಲ್ಲಲ್ಲಿ ಶರಣ ಸಾಹಿತ್ಯದ ತುಣುಕುಗಳು ಅವರ ಮೂಗಿಗೆ ಬಡಿದ ಗಂಧದಂತೆ ಸುವಾಸನೆ ಬೀರಿದ್ದವು. ಮಿಷನರಿಗಳ ಶಾಲೆಗಳಲ್ಲಿ ಬೈಬಲ್ ಇರುವುದನ್ನು ಗಮನಿಸಿದ ಅವರು ಹುಟ್ಟಿಬೆಳೆದ ಕರ್ಮಭೂಮಿಯಾದ ಧಾರವಾಡ, ಬೆಳಗಾವಿ, ಬಿಜಾಪುರಗಳಲ್ಲಿ ವಚನಗಳು ನೆಲದ ನಿಧಿಯಂತೆ ಎಲ್ಲೋ ಸೇರಿಕೊಂಡಿವೆ ಎಂಬುದನ್ನು ಅರಿತುಕೊಂಡಿದ್ದರು. ಜೊತೆಗೆ ಕನ್ನಡದ ವಚನ ಸಾಹಿತ್ಯದ ಆಂತರ್ಯವನ್ನು ಬಡಿದೆಬ್ಬಿಸತೊಡಗಿತು. ಇವೆರಡರ ಸಮ್ಮಿಲನ ಆಗುವ ಸಂದರ್ಭದಲ್ಲೆ ಶಿವಲಿಂಗಪ್ಪ ಮಂಜಾಲಿ ಮನೆಯಲ್ಲಿ ಪ್ರಭುದೇವರ ವಚನಗಳ ತಾಳೆಯೋಲೆ ಅವರ ಗಮನ ಸೆಳೆದು ತಾಳೆಯೋಲೆ ಸಂಗ್ರದಲ್ಲಿ ಅತ್ಯಾಸಕ್ತಿ ಹುಟ್ಟಿಸಿತು.

ಹೀಗಾಗಿ ಹಳಕಟಿಯವರು ತಮ್ಮ ವಕೀಲಿ ವೃತ್ತಿಗೆ ತಿಲಾಂಜಲಿ ಇತ್ತು, ವಚನಶಾಸ್ತ್ರ ಸಾರದ ಸಂಗ್ರಹಣೆ ನಿಮಿತ್ತ ಮಠ ಮಾನ್ಯಗಳನ್ನು ಶೋಧಿಸತೊಡಗಿದರು. ಅನೇಕ ಕಟೆ ತಾಳೆಯೋಲೆ ಕಟ್ಟುಗಳು ದೇವರ ಮನೆಗಳಲ್ಲಿ ಪೂಜೆ ಮಾಡಲು ಇಟ್ಟಿದ್ದರು.

ಕೆಲವು ಮಠಗಳು ದೇವರ ಕೋಣೆಗಳಲ್ಲಿ ಅವುಗಳನ್ನಿಟ್ಟು ಬೀಗಹಾಕಿಸಿದ್ದರು. ಅವರು ಅವುಗಳನ್ನೆಲ್ಲಾ ಶೋಧಿಸಿ, ಹೊರತೆಯಲಾರಂಭಿಸಿದರು. ಕೆಲವರು ಕೊಡಲು ಸಿದ್ಧರಿಲ್ಲದಾಗ ಅವುಗಳನ್ನು ಹಣಕೊಟ್ಟು ಕೊಳ್ಳುವ ಪರಿಸ್ಥಿತಿಯು ಬಂದಿತ್ತು. ೧೯೨೦ರ ಹೊತ್ತಿಗೆ ಇವರ ಸಂಗ್ರಹಿತ ತಾಳೆಯೋಲೆಗಳು ಒಂದು ಸಾವಿರ ಪುಸ್ತಕಗಳಿಗಾಗುವಷ್ಟು ಆಗುತ್ತಿತ್ತು. ಹಳಕಟ್ಟಿಯವರು ಅವುಗಳನ್ನು ಕ್ರೋಢೀಕರಿಸಿ ಆ ಎಲ್ಲಾ ಸಂಗ್ರಹಿತ ಕೃತಿಗಳನ್ನು ವಿಷಯಕ್ಕನುಗುಣವಾಗಿ ಹೊಂದಿಸಿ, ಓದಿಕೊಂಡು ಹೋಗುವಂತೆ ಮಾಡುವ ಪ್ರಜ್ಞಾ ಪ್ರಯತ್ನ ಮಾಡಿದರು. ಈ ಸಂಪಾದಿತ ತಾಳೆಯೋಲೆಗಳ, ಹಸ್ತಪ್ರತಿಗಳ ಪ್ರದರ್ಶನವನ್ನು ಬಿಜಾಪುರ ಜಿಲ್ಲೆಯಲ್ಲಿ ಏರ್ಪಡಿಸಿದರು. ಮೂಲೆ ಗುಂಪಾಗಿ, ಹುಳು ಹುಪ್ಪಡಿಗಳಿಗೆ ಆಹಾರವಾಗಿ ಹೋಗುವ ಪರಿಸ್ಥಿತಿಯನ್ನು ತಪ್ಪಿಸಿ, ಅವುಗಳನ್ನು ವಿಭಜಿಸಿ ವಚನಗಳು, ರಗಳೆಗಳು, ಶೂನ್ಯ ಸಂಪಾದನೆ ಕೃತಿವಾರು ಪ್ರತ್ಯೇಕಿಸಿದ ಮೇಲೆ ಅದನ್ನು ಓದಿದವರಿಗೆ, ಅಧ್ಯಯನಶೀಲರಿಗೆ ಕರ್ನಾಟಕದಲ್ಲಿ ಉದಯಿಸಿ ಹೋದ ಹೊಸಧರ್ಮವೊಂದರ ಅದ್ಭುತ ಸಾಹಿತ್ಯ ಈ ಜಗತ್ತಿಗೆ ಪರಿಚಯವಾಗಿದ್ದು.

ಹಳಕಟ್ಟಿಯವರ ಪರಿಶ್ರಮ, ಸಾತ್ವಿಕ ತೇಜಸ್ಸು, ವಿಚಾರಗಳ ಸಮತೋಲನ ಶೈಲಿಯಲ್ಲಿ ಸರಳತೆಯ ಸತ್ವ, ಸಂಶೋಧನಾ ದೃಷ್ಟಿ ಸತ್ಯಾನ್ವೇಷಣೆಯ ಬುದ್ಧಿ, ನಿಷ್ಪಕ್ಷಪಾತ ವಿಮರ್ಶೆಯ ಸದ್ಭಾವ ಅವರಲ್ಲಿದ್ದುದರಿಂದ ವಚನಸಾರ ಪ್ರಭುದೇವರ ವಚನಗಳು, ಸಿದ್ಧರಾಮೇಶ್ವರ ವಚನಗಳಿಗೆ ಬರೆದ ಪ್ರಸ್ತಾವನೆಯಲ್ಲಿ ಪುರಾತನ ಗ್ರಂಥಗಳನ್ನು ಶೋಧಿಸಿ, ಶುದ್ಧವಾಗಿ ಅಚ್ಚುಹಾಕುವ ಕಾರ್ಯವು ಯಾವಾಗಲೂ ಕಷ್ಟಕರವಾದದ್ದು ಎಂದು ಮನದಿಂಗಿತವನ್ನು ಬಿಚ್ಚಿಟ್ಟಿದ್ದಾರೆ. ಇದರಿಂದಾಗಿಯೇ ವೀರಶೈವಾಗಮ ವಚನಶಾಸ್ತ್ರಗಳ ಜೊತೆಗೆ ಅಸಂಖ್ಯಾತ ಶಿಲಾಲೇಖನಗಳ ಸಂಗ್ರಹ ಅಲ್ಲದೆ ಮೂಲಗ್ರಂಥ, ಟೀಕಾಗ್ರಂಥ, ಸ್ವತಂತ್ರಗ್ರಂಥ, ಧಾರ್ಮಿಕ ಪುರುಷರ ಚರಿತ್ರೆ ಸೇರಿದಂತೆ ೧೬೫ ಗ್ರಂಥಗಳನ್ನು ಬೆಳಕಿಗೆ ತಂದರು.

ಅಂಬಿಗರ ಚೌಡಯ್ಯ, ಆದಯ್ಯ, ಉರಿಲಿಂಗ ದೇವ, ಉರಿಲಿಂಗ ಪೆದ್ದಿ, ಕಲಕೇತ ಬ್ರಹ್ಮಯ್ಯ, ಕಾಳೆವ್ವ, ಕೂಗಿನ ಮಾರಿ ತಂದೆ, ಸಿದ್ದಲಿಂಗೇಶ್ವರ, ಘನಲಿಂಗ, ಚನ್ನಬವಸವೇಶ್ವರ, ದಾಸಿಮಯ್ಯ, ಮಡಿವಾಳ ಮಾಚಿದೇವ, ಮರುಳ ಶಂಕರದೇವ, ಮೆರೆಮಿಂಡದೇವ, ಸಕಳೇಶ ಮಾದರಸ, ಹಡದಪ ಅಪ್ಪಣನಂಥ ವಚನಕಾರರ ಜೊತೆಗೆ ಬಸವೇಶ್ವರ, ಪ್ರಭುದೇವ, ಮಹಾದೇವಿಯಕ್ಕ ಹೀಗೆ ಪ್ರಸಿದ್ಧ, ಅಪ್ರಸಿದ್ಧರಾದ ಒಟ್ಟು ೨೫೬ ವಚನಕಾರರನ್ನು ಕನ್ನಡಿಗರಿಗೆ ಪರಿಚಯಿಸಿದರಲ್ಲದೇ ಅವರ ಸಾಹಿತ್ಯದ ಸಂಪದವನ್ನು, ಹರವನ್ನು, ಮಹತ್ವವನ್ನು ಕನ್ನಡಿಗರಿಗೆ ಏಕಕಾಲಕ್ಕೆ ನೀಡಿದರು. ಮುಂಖಾನುಮುಂಖವಾಗಿ ೩೦ ವರ್ಷಗಳ ಕಾಲ ತಮ್ಮ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದರು. ಕಷ್ಟಕಾಲದಲ್ಲಿ ಇದ್ದರೂ ೩೫ ಸಂಪುಟಗಳು ತಮ್ಮ ಶಿವಾನುಭವದಲ್ಲಿ ಬೆಳಕು ಕಂಡವು.

ವಚನ ಸಾಹಿತ್ಯದ ಜೊತೆಗೆ ಇನ್ನೊಂದು ಕೈಗೊಂಡದ ಪ್ರಮುಖ ಕಾರ್ಯವೆಂದರೆ ಹರಿಹರ ಕವಿಯ ೪೦ಕ್ಕೂ ಹೆಚ್ಚಿನ ರಗಳೆಗಳ ಹಸ್ತಪ್ರತಿ ಸಂಗ್ರಹಿಸಿ ಪ್ರಕಟಿಸಿದರು. ೧೯೩೦ರ ಹೊತ್ತಿಗೆ ಶಿವಾನುಭ ಪತ್ರಿಕೆ ಮುಖಾಂತರ ಆವರೆಗೂ ಪ್ರಸಿದ್ಧರಾಗಿದ್ದ ವಚನಕಾರರ ವಚನಗಳನ್ನೆಲ್ಲಾ ಪ್ರಕಟಿಸತೊಡಗಿದರು. ಹೀಗೆ ಪತ್ರಿಕೆಯಲ್ಲಿ ಪ್ರಕಟಗೊಂಡ

ಗ್ರಂಥಗಳೆಂದರೆ ಬಸವೇಶ್ವರರ ವಚನಗಳು ಮತ್ತು ಮಹಾದೇವಿ ಅಕ್ಕನ ವಚನಗಳು. ಇವಲ್ಲದೆ ಹರಿಹರನ ೪೨ ರಗಳೆಗಳನ್ನು ಏಳು ಸಂಪುಟಗಳಲ್ಲಿ ಪ್ರಕಟಿಸಿ, ಏಳೇಳು ಜನ್ಮಕೂ ಮರೆಯಲಾರದಂಥ ಕಾಣಿಕೆಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿದರು. ಇವುಗಳಲ್ಲಿ ೧೭ ಪುರಾತನ ರಗಳೆಗಳು, ೨೦ ನೂತನ ರಗಳೆಗಳು, ೯ ಸಂಕೀರ್ಣ ರಗಳೆಗಳು. ಇದರ ಜೊತೆ ಗೂಳೂರ ಸಿದ್ಧವೀರಣಾಚಾರ್ಯನ ಶೂನ್ಯಸಂಪಾದನೆ ಪ್ರಕಟಿಸಿದರು. ಇದು ವೀರಶೈವ ಧರ್ಮ ಮಂದಿರಕ್ಕೆ ಒಂದು ಪ್ರಕಾಶಮಾನವಾದ ಕಲಶವನ್ನು ಇಟ್ಟಂತೆ ಎಂದು ಅದರ ಪ್ರಸ್ತಾವನೆಯಲ್ಲಿ ಬರೆದ ಈ ಒಂದು ಮಾತು ಆ ಗ್ರಂಥದ ಮಹತ್ವ ಸಾರುತ್ತದೆ. ವಚನ ಸಾಹಿತ್ಯವಲ್ಲದೇ ಮೈಲಾರ ಬಸಪ್ಪ, ಸೋಮಕಟ್ಟೆ ಕರಿವೃಷಬೇಂದ್ರ ಮೊದಲಾದ ಶರಣರ ಪದಗಳನ್ನು ಸಹ ಶಿವಾನುಭವದಲ್ಲಿ ಪ್ರಕಟವಾದವು.

ವಚನಶಾಸ್ತ್ರ ಸಾರವನ್ನು ೧೯೨೩, ೧೯೩೧ರಲ್ಲಿ ಮೂರು ಸಂಪುಟಗಳಲ್ಲಿ ರಚಿಸಿ, ವಚನಗಳ ಆಧಾರದ ಮೇಲೆ ಲಿಂಗಾಯತ ಧರ್ಮದ ತತ್ವಗಳನ್ನು, ಸೃಷ್ಟಿ, ಜ್ಞಾನ, ಕ್ರಿಯೆ, ಷಟ್‌ಸ್ಥಲ ವಿವರಗಳನ್ನು ವೀರಶೈವ ಆಚರಣೆಗಳನ್ನು ಅದರಲ್ಲಿ ಸಾದ್ಯಂತವಾಗಿ ವಿವರಿಸಿದ್ದಾರೆ. ಮೂರು ಭಾಗಗಳಲ್ಲಿ ೧೪೫ ಶಿವಶರಣ ಚರಿತ್ರೆಗಳನ್ನು ೭೭೦ ಶರಣರನ್ನು ಕುರಿತು ಅಮರಗಣಾದೀಶ್ವರ ಚರಿತ್ರೆಗಳನ್ನು ರೂಪಿಸಿದ್ದಲ್ಲದೇ ೨೪೬ ಪುಟಗಳ ಶಿವಾನುಭವ ಶಬ್ದಕೋಶವನ್ನು ಹೊರತಂದರು.

ಇಷ್ಟೆಲ್ಲವನ್ನೂ ಸಾಧಿಸಿದ ಈ ಘನಮಹಿಮರು ಹೇಳುವುದೇನೆಂದರೆ ಸಾಹಿತ್ಯದಲ್ಲಿ ಧರ್ಮಾಂಧತೆ ಇರಬಾರದು, ಶರಣರೆಂದೂ ಜಾತಿಯನ್ನು ಬೆಂಬಲಿಸುವುದಿಲ್ಲ. ಕಠಿಣ ಪರಿಶ್ರಮದಿಂದ ಮುಂದೆ ಬರಬೇಕೆ ವಿನಹ ಭಿಕ್ಷೆ ಬೇಡಬಾರದು. ಕಾಯಕವೇ ಪೂಜೆ ಆಗಬೇಕು ಎನ್ನುವುದು ಅವರ ವಾದವಾಗಿತ್ತು.

ಡಾ. ಫ.ಗು. ಹಳಕಟ್ಟಿಯವರು ಶಿಕ್ಷಣಕ್ಕೆ, ಸಾಹಿತ್ಯಕ್ಕೆ, ಒಕ್ಕಲುತನಕ್ಕೆ, ಸಹಕಾರತತ್ವಕ್ಕೆ ಬೆಂಬಲವಾಗಿ ನಿಂತವರು. ಬಿಜಾಪುರ ಜಿಲ್ಲೆಯ ಪ್ರದೇಶಾಭಿವೃದ್ಧಿ ಅವರ ಕನಸಿಕ ಕೂಸಾಗಿತ್ತು. ಹಾಗಾಗಿ ಶೈಕ್ಷಣಿಕ ಅಭಿವೃದ್ಧಿಯಾದರೆ ಮಾತ್ರ ಎಲ್ಲಾ ಅಭಿವೃದ್ಧಿಯಾದಂತೆ ಎಂದು ತಿಳಿದು ಇಂದಿನ ಕರ್ನಾಟಕಕ್ಕೆ ಅತಿ ದೊಡ್ಡ ಶಿಕ್ಷಣ ಸಂಸ್ಥೆಯಾದ ಬಿ.ಎಲ್.ಡಿ.ಇ. ಬೃಹತ್ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದರು. ಸಿದ್ದೇಶ್ವರ ಹೈಸ್ಕೂಲನ್ನು ಸ್ಥಾಪನೆ ಮಾಡಿದರು. ಬಿಜಾಪುರ ಕಾರ್ಯ ನಿರ್ವಹಣಾ ಸಮಿತಿ ಅಧ್ಯಕ್ಷರಾಗಿ ಭೂತನಾಳ ಕೆರೆ ನಿರ್ಮಾಣ ಮಾಡಿ ಬಿಜಾಪುರ ಜನರ ನೀರಿನ ದಾಹ ತೀರಿಸಿದರು. ಜಿಲ್ಲಾ ಲೋಕಲ್ ಬೋರ್ಡ್ ಸದಸ್ಯರಾಗಿ ನೇಕಾರರ ಸಂಘ, ಹತ್ತಿ ಮಾರಾಟಗಾರರ ಸಂಘ, ಶ್ರೀ ಸಿದ್ದೇಶ್ವರ ಅರ್ಬನ್ ಕೋ-ಆಪರೇಟಿವ್ ಬ್ಯಾಂಕನ್ನು ಸಹ ಸ್ಥಾಪಿಸಿ ಸಹಕಾರ ಬೆಳವಣಿಗೆಗೆ ಕಾರಣಕರ್ತರಾದರು. ೧೯೧೭ರಲ್ಲಿ ಬಿಜಾಪುರ ಜಿಲ್ಲಾ ಕಾಂಗ್ರೆಸ್ ಸಮಿತಿ ಸದಸ್ಯರಾದ ಅವರು ೧೪೨೦ರಲ್ಲಿ ಮುಂಬಾಯಿ ರಾಜ್ಯದ ವಿಧಾನ ಪರಿಷತ್ತಿಗೆ ಆಯ್ಕೆಯಾದರು.

ಹಳಕಟ್ಟಿಯವರು ಚಿರಂಜೀವಿಗಳಾದವರು. ಅವರ ಶರಣ ಸಾಹಿತ್ಯ ಸೇವೆಯ ಕಡೆ ಮನಸ್ಸು ಎಳೆಯುತ್ತಿದ್ದುದ್ದರಿಂದ ಪ್ರಭುತ್ವದ ಆಸೆ ಪಡದೇ, ಕನ್ನಡ ಭಾಷೆ ಹಾಗೂ ಕರ್ನಾಟಕ ಏಕೀಕರಣದ ಕಡೆಗೆ ಹೊರಳಿತು. ಜೂನ್ ೧೯೨೮ರಲ್ಲಿ ಧಾರವಾಡದಲ್ಲಿ

ನಡೆದ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ, ಚಳುವಳಿಗೆ ಚಾಲನೆ ನೀಡಿದರು. 'ನೀಡಿದರು. 'ನವ ಕರ್ನಾಟಕ' ವಾರಪತ್ರಿಕೆ ಆರಂಭಿಸಿ ಜನ ಜಾಗೃತಿ ಮೂಡಿಸಿ ಕರ್ನಾಟಕ ಏಕೀಕರಣಕ್ಕೆ ಹೋರಾಟ ಮಾಡಿದರು. ಮಹಾರಾಷ್ಟ್ರ, ಮದ್ರಾಸ್, ಹೈದ್ರಾಬಾದ್ ಪ್ರಾಂತ್ಯ ಮತ್ತಿತರ ಪ್ರದೇಶಕ್ಕೆ ಹಂಚಿಹೋಗಿದ್ದನ್ನು ಕರ್ನಾಟಕದ ಏಕೀಕರಣದ ವ್ಯಾಪ್ತಿಗೆ ತರಲು ಅಹರ್ನಿಶಿಯ ಚಳವಳಿಗೆ ಉದ್ದೀಪನೆ ನೀಡಿದರು.

೧೯೩೧ರಲ್ಲಿ ಮುಂಬಾಯಿ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾದರು. ೧೯೫೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ನೀಡಿ ಗೌರವಿಸಿತು. ಪಂಪ, ರನ್ನ, ಬಸವಣ್ಣ, ಪ್ರಭುದೇವ, ಹರಿಹರ, ರಾಘವಾಂಕರ ಪ್ರಬುದ್ಧ ಸಾಹಿತ್ಯದ ಬೆಳಕನ್ನು ಅಕ್ಷಯ ನಿಧಿಯಿಂದ ಹೊರತಂದರು. ಇವರ ಈ ಅಮೋಘ ಸಾಹಿತ್ಯ ಸೇವೆಯನ್ನು ಗಮನಿಸಿದ **ಕನ್ನಡ ಸಾಹಿತ್ಯ ಪರಿಷತ್ತು ೧೯೨೬ರಲ್ಲಿ ಬಳ್ಳಾರಿಯಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ**ರನ್ನಾಗಿ ಆಯ್ಕೆ ಮಾಡಿ ಅವರನ್ನು ಗೌರವಿಸಿತು. ಚಿಕ್ಕಮಗಳೂರಿನಲ್ಲಿ ನಡೆದ ಸಾಹಿತ್ಯ ಗೋಷ್ಠಿಯಲ್ಲಿ ಪ್ರಬುದ್ಧ ಪ್ರಬಂಧ ಮಂಡಿಸಿದ್ದಾರೆ. ಪರಿಷತ್ತು ಗಂಧದ ಕರಂಡಕದಲ್ಲಿ ಮಾನಪತ್ರ ನೀಡಿ ಸನ್ಮಾನಿಸಿದೆ.

ಮನ ನೋಡಾ ಸಂಪನ್ನರು, ಘನ ಮನ ಸಂಪನ್ನರಾದ ಡಾ. ಫ.ಗು. ಹಳಕಟ್ಟಿಯವರ ಮನೆ ನೋಡಿದರೆ ಘನ ಬಡವರು. ಅಲ್ಲಿನ ಒಬ್ಬ ಕವಿ ಈಶ್ವರ ಸಣಕಲ್ಲ ಹೇಳಿದಹಾಗೆ 'ಜಗವೆಲ್ಲಾ ನಗುತಿರಲಿ, ಜಗದಳಲು ನನಗಿರಲಿ' ಎನ್ನುವ ಹಾಗೆ ಇವರ ಜೀವನ. ಈ ಬಗ್ಗೆ ಒಂದೆರಡು ಪ್ರಸಂಗಗಳನ್ನು ಹೇಳದೇ ಹೋದರೆ ಕೃತಿಕಾರನ ಚರಿತ್ರೆ ಅಪೂರ್ಣವೆನಿಸುತ್ತದೆ.

ಡಾ.ಫ.ಗು. ಹಳಕಟ್ಟಿಯವರು **'ಹಿತಚಿಂತಕ'** ಪ್ರೆಸ್ ಸ್ಥಾಪನೆಗಾಗಿ ತಮ್ಮಲ್ಲಿದ್ದ ಎಲ್ಲವನ್ನು ಮಾರಾಟ ಮಾಡಿದರು. ಒಮ್ಮೆ ಡಾ. ಹಳಕಟ್ಟಿಯವರಿಗೆ ಅತ್ಯಂತ ಆರ್ಥಿಕ ಅಡಚಣೆ ಬಂದೊದಗಿತು. ಈ ಸಂಗತಿ ಹೇಗೋ ಬಬಲೇಶ್ವರದ ಪರಮಪೂಜ್ಯ ಶ್ರೀ ಶಾಂತವೀರ ಮಹಾಸ್ವಾಮಿಗಳಿಗೆ ತಿಳಿದು, ಐದು ಚೀಲ ಜೋಳ, ಒಂದು ಚೀಲ ಗೋಧಿ ಹಾಗೂ ಮುನ್ನೂರ ಐವತ್ತು ರೂಪಾಯಿಗಳ ನಗದು ನೀಡಿದರು. ದಾರಿದ್ರ್ಯ, ದುಃಖ, ದುರಂತಗಳ ಮಧ್ಯೆ ಇದ್ದರೂ ನಿರಾಶೆಯಾಗದೆ, ಬುದ್ಧಿಶಕ್ತಿಯನ್ನು ಕ್ರಿಯಾಶೀಲವಾಗಿಸುತ್ತಿದ್ದರು. ಇಂದಿಗೆಂತು, ನಾಳೆಗೆಂತು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವುಂಟೆ ರಾಮನಾಥ? ಎಂಬ ಶರಣರ ಉಕ್ತಿಯಂತೆ ಚಿಂತೆಯಿಂದ ಕಾತರಗೊಳ್ಳದೆ ಸಮಾಧಾನಿಯಾಗಿ ತಮ್ಮ ಪರಿಶೋಧನೆ ಕಾರ್ಯವನ್ನು ಅವ್ಯಾಹತವಾಗಿ ಅನವಿರತ ಮಾಡುತ್ತಿದ್ದರು.

ಮನೆಗೆ ಒಬ್ಬನೇ ಒಬ್ಬ ಆಧಾರವಾಗಿದ್ದ ಅವರ ಮಗ ಚಂದ್ರಶೇಖರ ಮರಣ ಹೊಂದಿದಾಗ, ಅನುಕಂಪದಿಂದ ಮಾತನಾಡಿಸಲು ಬಂದವರ ಜೊತೆ ವಚನ, ತಾಳೆಯೋಲೆ, ರಗಳೆಗಳ ಬಗ್ಗೆ ಮಾತನಾಡಿದರೇ ಹೊರತಾಗಿ ಮಗನ ಅಗಲುವಿಕೆ ದುಃಖವನ್ನು ಅವರ ಮುಂದೆ ತೋಡಿಕೊಳ್ಳಲೇ ಇಲ್ಲ. ಕರುಳನೋವಿಗೆ ಬಲಿಯಾಗಿದ್ದರೂ ಹೊಟ್ಟೆ ಮೇಲೆ, ತಾಳೆಯೋಲೆ, ವಚನೋದ್ಯಾನದ ಕೃತಿಗಳನ್ನು ಹೇರಿಕೊಂಡು ಅಧ್ಯಯನ

ಮಾಡುತ್ತಿದ್ದರು.

ಇನ್ನೊಂದು ಪ್ರಸಂಗವೆಂದರೆ ಡಾ. ಆರ್.ಸಿ. ಹಿರೇಮಠರ ಮನೆಯಲ್ಲಿ ನಡೆದ ಭೋಜನ ಕೂಟದಲ್ಲಿ ನಡೆದಿದ್ದು. ಡಾ. ಫ.ಗು. ಹಳಕಟ್ಟಿಯವರು ಯಾವಾಗಲೂ ಬಿಳಿ ಪಂಚೆ, ಬಿಳಿಕಾಲರ್ ಟೈ ಕಪ್ಪು ಇರುವ ಬಿಳಿ ಶರ್ಟ್ ಧರಿಸಿ ಅದರ ಮೇಲೆ ಕರಿ ಕೋಟು ಧರಿಸುತ್ತಿದ್ದರು. ಸಾಮಾನ್ಯವಾಗಿ ಉತ್ತರ ಕರ್ನಾಟಕದಲ್ಲಿ ಊಟಕ್ಕೆ ಕುಳಿತಾಗ ಅಂಗಿ ಕಳಚಿ ಊಟಮಾಡುವ ಪದ್ಧತಿ ಇತ್ತು. ಎಲ್ಲರೂ ಶರ್ಟ್ ಕಳಚಿಟ್ಟರೆ, ಹಳಕಟ್ಟಿಯವರು ಕೋಟ್ ಕಳಚಲಿಲ್ಲ. ಏಕೆಂದರೆ ಒಳಗೆ ಶರ್ಟ್ ಇರುತ್ತಿರಲಿಲ್ಲವಂತೆ. ಬಡತನ ಕಂಡುಬಂದರೆ ಮತ್ತೊಬ್ಬರು ಅನುಕಂಪ ತೋರಿಯಾರು ಎಂಬ ಹೆದರಿಕೆ.

ಮಹಾಕವಿಗಳು, ದಾರ್ಶನಿಕರು, ತತ್ವಾನ್ವೇಷಣೆ ಮಾಡುವವರಿಗೆ ನಿಶ್ಚಿಂತೆ ಹಾಗೂ ಸುಖಲೋಲುಪತೆ ಗಗನ ಮಲ್ಲಿಗೆಗಳೇ ಸರಿ. ಕವಿಗಳ ಕವಿ ಎಡ್ಮಂಡ್ ಸ್ಪೆನ್ಸರ್, ಧ್ಯೇಯಾದರ್ಶ ಇರಿಸಿದ ಸೆರಾಡಾಯಿಜ್ ವಾಸ್ಟ್, ಪೆರಾಡಾಯಜ್ ರೀಗಿಸ್ಟ್, ಸ್ಯಾಮನ್ ಜೊತೆಗೆ ರಾಮಾಶ್ವಮೇಧದ ಶ್ರೇಷ್ಠ ಕವಿ ಮುದ್ದಣನು ಬಡತನದ ದುರ್ದೆಶೆಯಿಂದ ಸತ್ತವರು. ಅಂಥವರ ಸಾಲಿಗೆ ಡಾ. ಫ.ಗು. ಹಳಕಟ್ಟಿಯವರು ಸೇರಿದ್ದು ತಾವು ಸ್ವತಃ ಬಡತನಕ್ಕೆ ಬಲಿಯಾದರೂ ಪೀಳಿಗೆಗೆ ಮನಃಪೂರ್ವಕವಾಗಿ ಕಾಯ್ದಿರಿಸಬಹುದಾದ ತಮ್ಮ ಅಮರ ಕೃತಿಗಳಿಂದ ವಿಶ್ವದ ಸಾರಸ್ವತ ಸಂಪತ್ತನ್ನು ಶ್ರೀಮಂತಗೊಳಿಸದ್ದಾರೆ.

ಅವರ ಕೃತಿಗಳ ವಿವರ :

೧. ಶ್ರೀ ಬಸವೇಶ್ವರ ವಚನಗಳು
೨. ಮಹಿಮಸೂತ್ರ
೩. ಮಹಾದೇವಿಯಕ್ಕನ ವಚನಗಳು
೪. ಲಿಂಗಪೂಜೆ ತತ್ವಗಳು
೫. ವೀರಶೈವ ರಗಳೆ
೬. ಪ್ರಭುದೇವರ ವಚನಗಳು
೭. ತೋಂಟದಾರ್ಯ ರಗಳೆ
೮. ಭಕ್ತಿಯ ವಚನಗಳು
೯. ಸಂಗನ ಬಸವೇಶ್ವರ ವಚನಗಳು
೧೦. ಘನಲಿಂಗನ ವಚನಗಳು
೧೧. ಏಕೋತ್ತರ ಶತಸ್ಥಲ
೧೨. ದೇವರದಾಸಿಮಯ್ಯನ ವಚನಗಳು
೧೩. ಹಡಪದಣ್ಣನ ವಚನಗಳು
೧೪. ಲಿಂಗಾಯತ ಮತ ತತ್ವ
೧೫. ಸಕಲೇಶ ಮಾದರಸನ ವಚನಗಳು
೧೬. ಗೂಳೂರು ಸಿದ್ದವೀರಣಾಚಾರ್ಯರ ಶೂನ್ಯ ಸಂಪಾದನೆ,

೧೭. ಆದಯ್ಯನ ವಚನಗಳು

೧೮. ವಚನ ಶಾಸ್ತ್ರ ಸಾರ ಭಾಗ-೧, ಭಾಗ-೨, ಭಾಗ-೩, ಭಾಗ-೪

೧೯. ಶಿವಾನುಭವ ಶಬ್ದಕೋಶ.

೨೦. ಸಿದ್ಧರಾಮೇಶ್ವರನ ವಚನಗಳು.

ಚನ್ನಬಸವೇಶ್ವರ ವಚನಗಳು, ಹರಿಹರನ ರಗಳೆಗಳು ಭಾಗ-೧, ಭಾಗ-೨ ಭಾಗ-೩-೪ ಭಾಗ-೫, ಭಾಗ-೬, ಭಾಗ-೭, ಭಾಗ-೪, ಕಾಲಜ್ಞಾನವರ ವಚನಗಳು, ಅಂಬಿಗರ ಚೌಡಯ್ಯನ ವಚನಗಳು, ಬಸವೇಶ್ವರನ ಷಂಟಸ್ಥಲ ವಚನದ ಕಥಾಸಾರ ೪, ಕಾಲಜ್ಞಾನ ಉರಿಲಿಂಗ ಪೆದ್ದಯ್ಯನ ವಚನಗಳು, ಶಿವಾನುಭವ ಸತ್ಯಮಾರ್ಗ, ಮಡಿವಾಳ ಮಾಚಿದೇವನ ವಚನಗಳು, ವಚನಶಾಸ್ತ್ರ ಭಾಗ-೩, ಶಿವಶರಣರ ಸಂಕೀರ್ಣ ವಚನಗಳು ಭಾಗ-೨, ಹರಳಯ್ಯನ ತ್ರಿಪದಿಗಳು, ಶಿವಶರಣರ ವಚನಗಳು ಭಾಗ-೩, ಮೆರೆಮಿಂಡ ದೇವನ ವಚನಗಳು, ಬಸವೇಶ್ವರರ ತತ್ವಗಳು, ಶಿವಶರಣರ ಅಹಿಂಸಾ ಧರ್ಮ, ಹಾವಿನಹಾಳ ಕಲ್ಲಿದೇವನ ವಚನಗಳು, ಸತ್ಯಕ್ಕನ ವಚನಗಳು, ಮಧುವರಸನ ವಚನಗಳು, ಮೋಳಿಗೆ ಮಾರಯ್ಯನ ವಚನಗಳು, ೭೭೦ ಅಮರ ಗಣಾಧೀಶ್ವರರ ಚರಿತ್ರೆಗಳು. ಇನ್ನು ಅನೇಕ ಗ್ರಂಥಗಳು ಇವರಿಂದ ಸಂಪಾದಿತಗೊಂಡಿವೆ.

ಇಷ್ಟೆಲ್ಲಾ ಮಾಡಿ ಕನ್ನಡ ವಾಙ್ಮಯದಲ್ಲಿ ವೀರಶೈವ ಸಾಹಿತ್ಯಕ್ಕೊಂದು ವಿಶಿಷ್ಠ ಸ್ಥಾನ ನೀಡಿ ಅದರ ಹಿರಿಮೆ ಗರಿಮೆಗಳು ಜಗತ್ತಿನ ಇನ್ನಿತರ ಪ್ರಸಿದ್ಧ ಸಾಹಿತ್ಯಗಳಿಗೆ ಸರಿಸಮಾನವಾಗಿ ನಿಲ್ಲುವಂತೆ ಮಾಡಿದ ಈ ಮಹಾನ್ ವ್ಯಕ್ತಿಯ ಉದಾತ್ತವಾದ ವ್ಯಕ್ತಿತ್ವವನ್ನು ಗುರುತಿಸದೇ ಹೇಗೆ ಹೋದರು. ಸತ್ಕಾರಕ್ಕೆ ಹೆಸರಾದ ಕನ್ನಡದ ಜನತೆ ಹಿಂದೆ ಏಕೆ ಕೈ ಬಿಟ್ಟಿತು. ಯೋಗ್ಯ ಗೌರವಾದರಗಳನ್ನು ನೀಡಲಿಲ್ಲ. ಬಹುಶಃ ಸುಮಾರು ೫೯ ವರ್ಷಗಳ ಸುದೀರ್ಘ ದಾಂಪತ್ಯ ಜೀವನ ನಡೆಸಿದ ಹಳಕಟ್ಟಿಯವರ ಬದುಕಿನುದ್ದಕ್ಕೂ ಸಂಗಾತಿಯಾಗಿದ್ದವರು ಮೂವರು. ಒಬ್ಬರು ಸಹಧರ್ಮಿಣಿ ಭಾಗೀರಥಿ ದೇವಿಯವರು. ಮತ್ತೊಂದು ಮನೆಯಿಂದ ಮುದ್ರಣಾಲಯಕ್ಕೆ ಮತ್ತು ಮುದ್ರಣಾಲಯದಿಂದ ಮನೆಗೆ ಕರೆದೊಯ್ಯುತ್ತಿದ್ದ ಸೈಕಲ್. ಇನ್ನೊಂದು ಎಂದರೆ ಶರಣ ಸಾಹಿತ್ಯ. ಆಶ್ಚರ್ಯದ ಸಂಗತಿ ಎಂದರೆ ಮಡದಿ ವಿಧಿವಶರಾಗಿದ್ದು ೨೫-೦೫-೧೯೬೪ರಲ್ಲಿ, ಹಳಕಟ್ಟಿಯವರು ನಿಧನರಾಗಿದ್ದು ೨೯-೦೬-೧೯೬೪ರಲ್ಲಿ, ಅವರು ಸಾಯುವ ಕಾಲಕ್ಕೆ ಸೈಕಲ್ ಒಂದನ್ನು ಬಿಟ್ಟರೆ ಬೇರೆ ಏನೂ ಅವರಲ್ಲಿ ಇರಲಿಲ್ಲ. ಅವರ ಪಾಡು ಎಂತಹ ಸ್ಥಿತಿಗೆ ಬಂದಿತ್ತು ಎಂಬುದು ಅರಿವಿಗೆ ಬಂದರೆ ವೇದನೆ ಎನಿಸುತ್ತದೆ. ಶರಣರ ವಚನಗಳಿಂದ ಉದ್ಧಾರವಾದ ಮಠಗಳು ಅವರನ್ನು ಕೃತಜ್ಞತೆಯಿಂದ ನೋಡದಿರುವುದು ದುರಂತೇ ಸರಿ. ಈಗಲಾದರೂ ಕನ್ನಡ ಜನತೆ ನಿಷ್ಠೆಯ ಕರ್ಮಯೋಗಿಗೆ ಋಣಿಯಾಗಿದ್ದುಕೊಂಡು ಅವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸಿದರೆ ಅವರ ಆತ್ಮಕ್ಕೆ ಶಾಂತಿ ಸಿಗಬಹುದೇನೋ?*

■

* ದಿನಾಂಕ : ೨೭-೬-೨೦೧೩ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸಾಹಿತ್ಯೋಪಾಸಕರು ಲೇಖನ ಮಾಲೆಯಡಿಯಲ್ಲಿ ನೀಡಿದ ಉಪನ್ಯಾಸ.

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೪

# ೪. ಹರಿಹರನ ರಗಳೆಗಳು : ಬದಲಾದ ಮೌಲ್ಯಗಳು

–ಡಾ. ಜಿ.ಆರ್. ತಿಪ್ಪೇಸ್ವಾಮಿ*

ಮನುಷ್ಯ ವಿಚಾರವಂತನಾಗಿದ್ದರೆ ಅವನಲ್ಲಿ ಬದಲಾವಣೆ ಸಾಧ್ಯ. ಒಂದು ಪಕ್ಷ ಆತ ಅದಕ್ಕೆ ವಿರುದ್ಧವಾಗಿದ್ದರೆ ಕೇವಲ ನಂಬಿಕೆ, ಆಚರಣೆ, ಸಂಪ್ರದಾಯ ಮೊದಲಾದ ಭ್ರಮೆಗಳೇ ಆತನಲ್ಲಿ ಆವರಿಸಿ ಅವೇ ಅವನ ಮುಖ್ಯ ಸ್ವಭಾವಗಳಾಗಿಬಿಡುವ ಸಂಭವವೂ ಉಂಟು. ಮುಷ್ಯನೇ ಚರಿತ್ರೆಯನ್ನು ಸೃಷ್ಟಿಸಿದನೆಂದು ಹೇಳುತ್ತಾರೆ. ಆದರೆ ಅದೇ ಸಂದರ್ಭದಲ್ಲಿ ಪ್ರಪಂಚದ ಆಗುಹೋಗುಗಳಲ್ಲಿ ಬಹುಸಂಖ್ಯಾತ ಜನಸಾಮಾನ್ಯರಿಗೆ ಯಾವ ಅಸ್ತಿತ್ವವೂ ಇಲ್ಲವೆಂಬುದನ್ನು ಗಮನಿಸುತ್ತೇವೆ. ಇತಿಹಾಸದಲ್ಲಿ ಕೇವಲ ಕೆಲವರೇ ಅತ್ಯಂತ ಸುಖಿಗಳಾಗಿದ್ದರೆಂಬುದು ನಿಜ. ಈ ಏರು ಪೇರುಗಳುಂಟಾಗಿರುವುದು ಮನುಷ್ಯನಲ್ಲಿ ವಿಚಾರ ಮಾಡುವ ಶಕ್ತಿ ಇಲ್ಲದೆ ಹೋಗಿರುವುದರಿಂದ. ಮುಖ್ಯವಾಗಿ ಇದು ಬರಬೇಕು. ಮನುಷ್ಯನಿಗೆ ಸ್ವಂತ ಯೋಚನೆ ಇಲ್ಲದಿದ್ದರೆ ಬಿಕ್ಕಟ್ಟಿನಿಂದ ಹೊರಬರಲು ಸಾಧ್ಯವಿಲ್ಲ. ಮೊದಲು ಆತ ಆತ್ಮವಿಶ್ವಾಸವನ್ನು ತಂದುಕೊಳ್ಳಬೇಕಾಗಿದೆ. ಇದು ಸಾಧ್ಯವಾಗದ ಹೊರತು ಮನುಷ್ಯನ ಸ್ವಾತಂತ್ರ್ಯ, ಭವಿಷ್ಯ – ಇವುಗಳಿಗೆ ಅರ್ಥವಿಲ್ಲ. ಬುದ್ಧ, ಬಸವ, ಅಂಬೇಡ್ಕರ್, ಮಾರ್ಕ್ಸ್ ಮುಂತಾದವರನ್ನು ಬಿಟ್ಟರೆ ತಮ್ಮನ್ನು ತಾವೇ ನಂಬಿದವರು ಇಲ್ಲವೇ ಇಲ್ಲ ಎನ್ನಬಹುದು. ಸಮಾಜದ ರಚನೆಗೆ, ಇತಿಹಾಸದ ಬೆಳವಣಿಗೆಗೆ, ಸಂಸ್ಥೆಗಳ ಅಭಿವೃದ್ಧಿಗೆ ಎಲ್ಲಕ್ಕೂ ಮನುಷ್ಯನೇ ಕಾರಣನಾಗಿರುವಾಗ ಎಲ್ಲ ಕ್ಷೇತ್ರಗಳಲ್ಲೂ ಮನುಷ್ಯನೇ ಕೇಂದ್ರವಾಗಿರಬೇಕು ಎಂಬುದು ಎಲ್ಲ ಬುದ್ಧಿಜೀವಿಗಳ ಆಶಯವಾಗಿದೆ. ಇಷ್ಟಾಗಿಯೂ ಮನುಷ್ಯನನ್ನು ಎಲ್ಲದರ ಕೇಂದ್ರವಾಗಿಸಬೇಕೆಂಬ ಪ್ರಯತ್ನ ನಡೆದದ್ದು ಮಧ್ಯಯುಗದ ಯೂರೋಪಿನಲ್ಲಿ. ಕೆಥೋಲಿಕ್ ಚರ್ಚಿನ ಆಧ್ಯಾತ್ಮಿಕ ದಬ್ಬಾಳಿಕೆಯ ವಿರುದ್ಧವಾಗಿ ಅಲ್ಲಿಯ ಜನ ಪ್ರತಿಭಟನೆ ಸಲ್ಲಿಸಿದ್ದರಿಂದ ಮನುಷ್ಯನಿಗೆ, ಅವನ ಚಟುವಟಿಕೆಗಳಿಗೆ ವಿಶೇಷ ಮಾನ್ಯತೆ ದೊರಕಿತು. ಈ ಬದಲಾವಣೆಯು ಪರಿಣಾಮವಾಗಿ 'ಯೂರೋಪಿಯನ್ ರಿನೇಸಾನ್ಸ್'ನ ನಾಯಕರು ತಮ್ಮನ್ನು ಮಾನವತಾವಾದಿಗಳೆಂದು

* ಕನ್ನಡ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು – ೫೭೦ ೦೦೬. ದೂರವಾಣಿ : ೦೮೨೧-೨೪೧೯೮೬೨.

ಕರೆದುಕೊಂಡರು. ಭಾರತದಲ್ಲಿ ಮಾನವತಾವಾದದ ಎಳೆ ಇದ್ದಿತಾದರೂ ಮುಚ್ಚಿಹೋಗಿದೆ. ಹಾಗೆ ನೋಡಿದರೆ ಬೇರೆಡೆಗಳಿಗಿಂತ ಭಾರತದ ಮನುಷ್ಯ ತುಂಬ ನಿರ್ಲಕ್ಷ್ಯಕ್ಕೀಡಾಗಿದ್ದಾನೆ. ರಿನೇಸಾನ್ಸ್ ದಾರ್ಶನಿಕರು ಮನುಷ್ಯನನ್ನು ಸಾರ್ವಭೌಮನನ್ನಾಗಿ ಮಾಡಿದರು. ಅಷ್ಟೊಂದು ಮೌಲಿಕತೆಯನ್ನು ತಂದುಕೊಟ್ಟ ಆ ಜನತೆ ಆಧ್ಯಾತ್ಮವನ್ನು ವಿರೋಧಿಸಿ ಮನುಷ್ಯನನ್ನು ಎತ್ತಿ ಹಿಡಿದು ಅವನನ್ನು 'ನಿಗೂಢ'ಗೊಳಿಸಿದರು. ಈ ಮಾನವವಾದಿಗಳಲ್ಲಿ ಕ್ವೇಕರ್ಸ್ ಮೊದಲಾದವರು ಮನುಷ್ಯನಿಗೇನೋ ಮಹತ್ವವನ್ನು ಕೊಟ್ಟರು. ಆದರೆ ಅದೇ ಮನುಷ್ಯನನ್ನು ಅತಿಮಾನುಷ ಹಾಗೂ ಅಲೌಕಿಕ ಶಕ್ತಿಗಳಿಗೆ ಸೇವಕನನ್ನಾಗಿ ಮಾಡಿಬಿಟ್ಟರು. ಮನುಷ್ಯರ ಮನಸ್ಸುಗಳನ್ನು ಮೊದಲು ಇಂಥ ದಾಸ್ಯಗಳಿಂದ ಬಿಡುಗಡೆ ಮಾಡಬೇಕು. ಅದಾಗದ ಹೊರತು ಆತನ ಪ್ರಗತಿ ಸಾಧ್ಯವಿಲ್ಲ. ಪುನರುಜ್ಜೀವನವಾದಿಗಳು ಕ್ರಾಂತಿ ನಡೆಸಿದರೂ ವೈಜ್ಞಾನಿಕವಾಗಿ, ವೈಚಾರಿಕವಾಗಿ ಮನುಷ್ಯನ ಬಗ್ಗೆ ಆಲೋಚಿಸಿದ್ದು ಇತ್ತೀಚೆಗೆ.

ಭಾರತೀಯ ಸಂದರ್ಭದಲ್ಲಿ ಸಾಮಾನ್ಯ ಮನುಷ್ಯ ಸಾಹಿತ್ಯದೊಳಗೆ ಕಾಣಿಸುವುದಾಗಲೀ, ಅದನ್ನು ರಚಿಸುವುದಾಗಲೀ ಅಷ್ಟು ಸುಲಭವಲ್ಲ. ಸಮಾಜದಲ್ಲಿ ಬಹು ಸಂಖ್ಯಾತರ ಆಸೆ ಆಕಾಂಕ್ಷೆಗಳನ್ನು ಇಲ್ಲವಾಗಿಸಿ ಅವರ ಬೌದ್ಧಿಕ ಬೆಳವಣಿಗೆಯನ್ನು – ಸೃಜನಶೀಲ ಚಟುವಟಿಕೆಗಳನ್ನು ನಿರ್ನಾಮ ಮಾಡಿದ್ದರಿಂದ ಮನುಷ್ಯನ ಕಲ್ಪನೆ ಸಾಹಿತ್ಯಾಭಿವ್ಯಕ್ತಿಯಲ್ಲಿ ಬಾರದೇ ಹೋಯಿತು. ದೊರೆಗಳ ಸುಖ ಸಂತೋಷಗಳು ಸಾಹಿತ್ಯದಲ್ಲಿ ವ್ಯಾಪಕವಾಗಿ ಆವರಿಸಿಬಿಟ್ಟವು. ಆಳುವವರ ಭಾವನೆಗಳೇ ಎಲ್ಲರ ಭಾವನೆಗಳೆಂಬಂತೆ ಒಡಮೂಡಿದವು. ಅದಕ್ಕೆ ತಕ್ಕ ಹಾಗೆ ವಿಮರ್ಶೆ, ಮೀಮಾಂಸೆಗಳು ವಿಜೃಂಭಿಸಿದವು. ಹಾಗಾಗಿ ಪ್ರಭುನಿಷ್ಠ ಸಾಹಿತ್ಯ ಹೊರಬಿತ್ತು. ನಾವು ಹುಡುಕುವ ಸಾಮಾನ್ಯ ಮನುಷ್ಯ ನಾಪತ್ತೆಯಾಗಿ ಧರ್ಮವೂ ಅದರೊಂದಿಗೇ ಮೂಡಿಬಂತು. ಕಾಲಕ್ರಮದಲ್ಲಿ ಪ್ರಭುನಿಷ್ಠೆ ಕಡಿಮೆಯಾಗಿ ಧರ್ಮನಿಷ್ಠೆ ಅತಿಯಾಯಿತು. ಆಗ ಪ್ರಭು ಮತ್ತು ಪ್ರಜೆಯ ಸಂಬಂಧಕ್ಕೆ ಬದಲಾಗಿ ದೈವ ಮತ್ತು ಪ್ರಜೆಯ ಸಂಬಂಧ ಗೋಚರವಾಯಿತು ಪ್ರಭುನಿಷ್ಠೆಯಲ್ಲಿ ಪ್ರಜೆಗೆ ಒಂದು ರೀತಿಯ ಆತ್ಮಸ್ಥೈರ್ಯ ಮತ್ತು ಸ್ವತಂತ್ರ ಮನೋಧರ್ಮವಿರುತ್ತದೆ. "ಆದರೆ ಈ ಎರಡನ್ನೂ ಅಂದರೆ ಪ್ರಭುನಿಷ್ಠೆ ಹಾಗೂ ಧರ್ಮನಿಷ್ಠೆಗಳೆರಡನ್ನೂ ನಿರಾಕರಿಸಿದಾಗ ಹುಟ್ಟಿಕೊಳ್ಳುವ ಸಾಮಾಜಿಕ ಪ್ರಜ್ಞೆ ಒಂದು ಮಹತ್ವದ ಚಾರಿತ್ರಿಕ ಘಟನೆ ಎಂಬುದರಲ್ಲಿ ಸಂದೇಹವಿಲ್ಲ. ಈ ಹಂತದಲ್ಲಿ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ತನ್ನ ಸಾಮಾಜಿಕ ಸಂದರ್ಭದ ಸಂಗಡಿಗನೆಂಬಂತೆಯೂ ತಾನು ಕಾಣದ ಅಥವಾ ನಂಬಿದ ಆ ದೈವಕ್ಕಿಂತ ನೇರವಾಗಿ ಕಾಣುವ ಈ ಬದುಕಿಗೆ ಸೇರಿದವನೆಂಬಂತೆಯೂ ಗುರುತಿಸುವ ಮಾನವ ಕೇಂದ್ರಿತ ಕಾಳಜಿಗಳು ಮುಖ್ಯವಾಗುತ್ತವೆ ಮತ್ತು ಈ ನಿಲುವಿನಲ್ಲಿ ತನ್ನ ಪರಿಸರವನ್ನು, ತನ್ನ ಪರಂಪರೆಯದನ್ನು ಪ್ರಶ್ನಿಸುವ ಮತ್ತು ವಾಸ್ತವವನ್ನು ಬದಲಾಯಿಸುವ ಪ್ರತಿಭಟನೆಯ ಮನೋಧರ್ಮ ರೂಪುಗೊಳ್ಳುತ್ತದೆ"[11]

ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ರಾಜನಿಷ್ಠೆಯ ವಿರುದ್ಧವಾಗಿ ಹುಟ್ಟಿಕೊಂಡ ವಿರೋಧಗಳು ಧರ್ಮದ ಬಗೆಗೆ ಹುಟ್ಟಿಕೊಳ್ಳಲಿಲ್ಲ. ಇದಕ್ಕೆ ವಚನಕಾರರು ಮತ್ತು ದೇಸಿ ಕವಿಗಳು ಉದಾಹರಣೆಯಾಗಿದ್ದಾರೆ. ಇದನ್ನೆಲ್ಲ ಗಮನಿಸಿದಾಗ ರಾಜನಿಷ್ಠ, ಧರ್ಮನಿಷ್ಠ ಮನುಷ್ಯ ಎದ್ದು ಕಾಣಿಸುತ್ತಾನೆಯೇ ಹೊರತು ನಿಜವಾದ ಅರ್ಥದ ಸಾಮಾಜಿಕ ಮನುಷ್ಯನಲ್ಲ.

ಈ ಬೆಳವಣಿಗೆಯನ್ನೆಲ್ಲ ಗಮನಿಸಿದಾಗ ಕಾವ್ಯದ ನಾಯಕರು ಆದರ್ಶದ ನೆಲೆಯಲ್ಲೇ ಇದುವರೆಗಿನ ಕನ್ನಡ ಸಾಹಿತ್ಯದಲ್ಲಿ ಚಿತ್ರಿತರಾಗಿದ್ದಾರೆ. ಅಂಥ ಆದರ್ಶವಿಲ್ಲದವರು ಸಾಮಾನ್ಯ ವ್ಯಕ್ತಿಗಳಾಗಿದ್ದಾರೆ. ಇಂಥ ಸಾಮಾನ್ಯರೇ ಮಧ್ಯಕಾಲೀನ ಸಾಹಿತ್ಯದಲ್ಲಿ ಮುಖ್ಯರಾಗುತ್ತಾರೆ. ದಾನ, ತ್ಯಾಗ ಇವುಗಳ ಹಿನ್ನೆಲೆಯಲ್ಲಿ ಗುರುತಿಸುತ್ತಿದ್ದ, ಬೆಲೆ ಕಟ್ಟುತ್ತಿದ್ದ ಮನುಷ್ಯನ ಸ್ಥಾನ ಮಧ್ಯಯುಗದಲ್ಲಿ ಬದಲಾವಣೆಗೊಂಡಿದೆ. ಹಿಂದೆ 'ಮುಖ್ಯ'ನಾಗಿರಬೇಕಾಗಿತ್ತು. 'ವೀರ'ನಾಗಿರಬೇಕಿತ್ತು, 'ತ್ಯಾಗಿ'ಯಾಗಿರಬೇಕಿತ್ತು, 'ಆದರ್ಶ' ನಾಗಿರಬೇಕಿತ್ತು. ಆದರೆ 'ವೀರ', 'ತ್ಯಾಗಿ', 'ಆದರ್ಶ' – ಇವಿಲ್ಲದಿದ್ದರೂ ಸಹ ಮಧ್ಯಯುಗದಲ್ಲಿ ಮನುಷ್ಯನಿಗೆ ಘನತೆ ಹೆಚ್ಚುವಂತೆ ಸಾಹಿತ್ಯ ಸೃಷ್ಟಿಯಾಗಿರುವುದನ್ನು ಕಾಣುತ್ತೇವೆ.

ಮನುಷ್ಯ ಎಂದರೇನು? ಅವನು ಬದಲಾಗುವುದು ಎಂದರೇನು? ಅದು ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅವನು ಹೇಗೆ ಬದಲಾದ? ಏಕೆ ಬದಲಾದ? ಎಂಬಂಥ ಪ್ರಶ್ನೆಗಳನ್ನು ನಾವು ಇಲ್ಲಿ ಕೇಳಿಕೊಳ್ಳಬೇಕಾಗುತ್ತದೆ. ಮನುಷ್ಯನೂ ಒಬ್ಬ ಜೀವಿ, ಸಮಾಜ ಜೀವಿ, ಅವನಿಗೆ ಆಲೋಚನೆ ಮಾಡುವ ಸಾಮರ್ಥ್ಯವಿದೆ. ಆದ್ದರಿಂದ ಅವನು ತನ್ನ ಸುತ್ತಣ ಪರಿಸರದೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬದುಕಬಲ್ಲ. ಆ ರೀತಿ ಬದಕು ನಡೆಸುತ್ತ ಬಂದುದರಿಂದಲೇ ಜೀವಸಂಕುಲಗಳ ಮಧ್ಯೆ ಉಳಿದುಕೊಂಡು ಬಂದಿದ್ದಾನೆ. ಆ ರೀತಿ ಬದುಕು ನಡೆಸಲು ಸಾಧ್ಯವಾಗದ ಅನೇಕ ಜೀವಸಂಕುಲಗಳು ಭೂಮಿಯ ಮೇಲಿನಿಂದ ಕಣ್ಮರೆಯಾಗಿ ಹೋದವು ಎಂಬುದನ್ನು ಡಾರ್ವಿನ್ ತೋರಿಸಿಕೊಟ್ಟ ತರುವಾಯ ಮನುಷ್ಯ ಶಾರೀರಿಕವಾಗಿ ಮತ್ತು ಮಾನಸಿಕವಾಗಿ ದೇಶ –ಕಾಲ–ಸನ್ನಿವೇಶಗಳಿಗೆ ತನ್ನನ್ನು ಒಗ್ಗಿಸಿಕೊಳ್ಳುವ ಮೂಲಕ ಬದಲಿಸಿಕೊಳ್ಳುತ್ತಾ ಉಳಿದುಕೊಂಡು ಬಂದಿದ್ದಾನೆ.

ಬದುಕಿನಲ್ಲಿ ಅವನು ಕಾಲಕಾಲಕ್ಕೆ ಹೇಗೆ ಬದಲಾಗುತ್ತ ಬಂದನೋ ಆ ಬೆಳವಣಿಗೆಯ ಕಥೆ ಆತನೇ ನಿರ್ಮಿಸಿದ ಸಾಹಿತ್ಯದೊಳಗೂ ದಾಖಲೆಯಾಗುತ್ತ ಬಂದಿತು. ಯಾಕೆಂದರೆ ಸಾಹಿತ್ಯ, ಕಲೆಗಳು ಜೀವನದ ಪ್ರತಿಬಿಂಬವಾದುದರಿಂದ ಮನುಷ್ಯನು ಬದುಕಿನ ಹಾದಿಯಲ್ಲಿ ಹೆಜ್ಜೆ ಇಡುತ್ತ ನಡೆಯುವಾಗ ಅದಕ್ಕೊಂದು ವ್ಯವಸ್ಥೆಯ ಚೌಕಟ್ಟು ಬಿದ್ದು ಹೋಗುತ್ತದೆ. ಆರಂಭಕ್ಕೆ ಅನುಕೂಲಕರವಾಗಿ ಕಂಡ ದಾರಿ ಕಾಲಾನುಕ್ರಮದಲ್ಲಿ ತೊಡಕಾಗಿ ಸಂಪ್ರದಾಯಕ್ಕೆ ಬಿದ್ದು ಅವನ ವಿಕಾಸಕ್ಕೆ ಅಡ್ಡಗೋಲಾಗಿ ನಿಲ್ಲುತ್ತದೆ. ಅಂಥ ಸಂದರ್ಭದಲ್ಲಿ ವಿಚಾರವಂತ ಮನುಷ್ಯ ಈ ತಡೆಯನ್ನು ನಿವಾರಿಸಿ ದಾರಿಯನ್ನು

ಸುಗಮ ಮಾಡಿಕೊಳ್ಳಲು ಹಾತೊರೆಯುತ್ತಾನೆ. ಇದು ಕನ್ನಡದ ಸಾಹಿತ್ಯದಲ್ಲಿ ಅನುಕ್ರಮವಾಗಿ ಹೇಗೆ ಬೆಳೆಯಿತು, ಯಾವ ಪ್ರಮಾಣದಲ್ಲಿ ಬೆಳೆಯಿತು, ಯಾವ ಕ್ರಮದಲ್ಲಿ ಬದಲಾಯಿತು ಎಂಬುದು ಕುತೂಹಲಕಾರಿಯಾದ ಅಂಶ.

ಜನ್ನನ ಕಾವ್ಯಗಳಲ್ಲಿನ ಮನುಷ್ಯನ ಬದಲಾವಣೆಯನ್ನು ಎರಡು ನೆಲೆಗಳಲ್ಲಿ ಚರ್ಚಿಸಬೇಕು. ಒಂದು : ವ್ಯಕ್ತಿಯ ನೆಲೆ, ಮತ್ತೊಂದು : ಸಾಮಾಜಿಕ ನೆಲೆ. ವ್ಯಕ್ತಿ ನೆಲೆಯಲ್ಲಿ ಆದ ಬದಲಾವಣೆಯೇ ಸಾಮಾಜಿಕ ನೆಲೆಗೆ ವಿಸ್ತರಿಸಿಕೊಳ್ಳುತ್ತದೆ. ಅಮೃತಮತಿಯ ಕಾಮ ವಿಕಾರಗಳನ್ನು ಅತಿರಂಜಿಸಿ ಹೇಳುವ ಜನ್ನ ಕವಿಯ ಆಶಯವೇ ಬೇರೆ. ಮಾರಿದತ್ತನಂಥ ಕ್ರೂರ ಕರ್ಮಿಯೂ ಮುನಿಕುಮಾರರ ಭವಾವಳಿಯ ಕಥೆಯನ್ನು ಕೇಳಿ ವಿಧಿಯು ಕೈಗೆ ಸಿಕ್ಕಿದರೆ ಮೂಗುಕೊಯ್ದು ಇಟ್ಟಿಗೆಯಿಂದ ಒರೆಸಿ ಬಿಡುತ್ತೇನೆ ಎಂಬಷ್ಟು ಬದಲಾದ.ಅಂದರೆ ಜೈನಧರ್ಮಕ್ಕೆ ಪರವಾದ ನಿಲುವನ್ನು ತಾಳಿದ ಎಂದು ಅರ್ಥ. ಅವನತಿಯತ್ತ ಸಾಗುತ್ತಿದ್ದ ಜೈನಧರ್ಮವನ್ನು ಪುನರುತ್ಥಾನಗೊಳಿಸುವುದಕ್ಕೆ ಜನರು ಆಕರ್ಷಿತರಾಗುವಂತೆ ಮಾಡುವುದಕ್ಕೆ 'ಯಶೋಧರ ಚರಿತೆ' ಇಲ್ಲಿ ಪ್ರಚಾರ ಮಾಧ್ಯಮವಾಗಿದೆ. ಆ ಕೆಲಸ ಕೈಗೂಡಿದರೆ, ಯಶಸ್ವಿಯಾದರೆ ಕವಿಯ ಉದ್ದೇಶ ಈಡೇರಿದಂತೆ. ಆದ್ದರಿಂದಲೇ ಕೊನೆಯ ದೃಶ್ಯದಿಂದಲೇ ಕಾವ್ಯ ಆರಂಭವಾಗುವುದು. ಹೀಗೆ ಆಗಲು ಕಾರಣವೇನು ಎಂಬ ಕುತೂಹಲವನ್ನು ಕೆರಳಿಸುವುದರ ಮೂಲಕ ಕೇಳುಗರು ಆ ಕುತೂಹಲದ ಅಂಗುಷ್ಠದ ಮೇಲೆ ನಿಂತಾಗ ಹಿಂದಿನ ಕಥೆಯನ್ನು ಜಲಪಾತದಂತೆ ಧುಮಿಕಿಸಿ ರಸದ ವಿದ್ಯುತ್ ಆಗರವನ್ನು ಕಂಪನಗೊಳಿಸುತ್ತಾನೆ. ಇಲ್ಲಿ ಮಾರಿದತ್ತ ಬದಲಾವಣೆಯೇ (ಹಿಂಸೆಯ ನೆಲೆಯಿಂದ ಅಹಿಂಸೆಯ ನೆಲೆಗೆ) ಇಲ್ಲಿ ಪ್ರಮುಖವಾಗುತ್ತದೆ. ಹಾಗೆ ನೋಡಿದರೆ ವಚನ ಸಾಹಿತ್ಯದ ಪ್ರಕಾರ ಆ ಬದಲಾವಣೆ ಬದಲಾವಣೆಯೇ ಅಲ್ಲ. ಜನ್ನ ಯಥಾಸ್ಥಿತಿಯನ್ನೇ ಅಂದರೆ ಜೈನ ಧಾರ್ಮಿಕ ಪರಂಪರೆಯನ್ನೇ ಮತ್ತೆ ಸಂಸ್ಥಾಪಿಸಲು ಹೊರಟಿದ್ದಾನಷ್ಟೆ. ಅಮೃತಮತಿ ಜನ್ನನ ಕೈಗೆ ಸಿಲುಕಿ ಜೈನಧರ್ಮಕ್ಕೆ ಜನರನ್ನು ಸೆಳೆಯುವ 'ದೀವಮೃಗ'ವಾಗುತ್ತಾಳೆ. ಅಷ್ಟರಮಟ್ಟಿಗೆ ಅವಳ ಪಾತ್ರ ಮಿಂಚಿ ಮಾಯವಾಗಿ ಬಿಡುತ್ತದೆ. ಅದನ್ನು ಪ್ರತಿಭಟನೆ ಎಂದು ಭಾವಿಸಿ ಇದುವರೆಗೆ ಅನೇಕರು ದಿಕ್ಕು ತಪ್ಪಿದ್ದಾರೆ 'ಅನಂತನಾಥಪುರಾಣ'ದ ಚಂಡಶಾಸನನೂ ಸಹ ಬದಲಾದ ಮೌಲ್ಯಕ್ಕೆ ಸಂಕೇತವಾಗಲಾರ, ಸುನಂದೆಯ ಮೇಲಿನ ಅವನ ಮೋಹ ಚಿತೆ ಏರಿಸಿದರೂ ಹುಚ್ಚು ಭಾವಾವೇಶ ಅವನದು. ಹಾಗಾಗಿ ಇದಕ್ಕೆ ಬೆಲೆ ಬರುವುದಿಲ್ಲ. ಆದ್ದರಿಂದಲೇ 'ಯಶೋಧರ ಚರಿತೆ'ಯ ಅಮೃತಮತಿಯ ತರ್ಕ ಹೆಚ್ಚು ಸಮ್ಮತವಾಗುತ್ತದೆ. ಗಂಡು ಹೆಣ್ಣು ಪರಸ್ಪರ ಒಲಿದು ಆಕೆಯ ಸಲುವಾಗಿ ಚಿತೆ ಏರಿದ ಎಂದಿದ್ದರೆ ಆಗ ಬದಲಾದ ಮನುಷ್ಯನನ್ನು ಕಾಣಬಹುದಿತ್ತು. ಇದು ಕೇವಲ ಏಕಮುಖವಾದುದು. ಕವಿಯ ಕಣ್ಣು ಸುನಂದೆಯ ವೈರಾಗ್ಯದತ್ತ ಕೀಲಿಸಿದೆಯೇ ಹೊರತು ಚಂಡಶಾಸನನ ಕಡೆಗಲ್ಲ ಎಂಬುದನ್ನು ಮರೆಯಬಾರದು. ಇನ್ನು ಯಶೋಧರ – ಚಂದ್ರಮತಿ – ಮುಂತಾದ ಪಾತ್ರಗಳು ಯಥಾಸ್ಥಿತಿಯಲ್ಲಿ ಜೈನ ಪರಂಪರೆಯನ್ನು ಕಾಪಾಡಿಕೊಳ್ಳಲು ಹೆಣಗಾಡುವ ಸ್ಥಿತಿ ತುಂಬಾ ಕರುಣಾಜನಕವಾಗಿದೆ. ಆ ಪಾತ್ರಗಳಿಗೆ ನಿಜಕ್ಕೂ ಹಾಗೆ

ನೀವು ಆಗಬಯಸುವಿರಾ ಎಂದರೆ ನಕಾರಾತ್ಮಕ ಉತ್ತರ ಸಿಕ್ಕಬಹುದೇನೋ! ಯಾಕೆಂದರೆ, ಜೈನಧರ್ಮ ತನ್ನ ಉಚ್ಛ್ರಾಯ ಸ್ಥಿತಿಯಿಂದ ಕೆಳಗಿಳಿದು ವೀರಶೈವಕ್ಕೆ ದಾರಿಮಾಡಿಕೊಟ್ಟಿತ್ತು. ಆದ್ದರಿಂದ ದುರ್ಬಲಗೊಳ್ಳುತ್ತಿರುವ ಒಂದು ಜೈನ ಪರಂಪರೆಯಲ್ಲಿ ವೈದಿಕ ವಿಧಿ, ಆಚರಣೆಗಳು ನುಸುಳುತ್ತಿರುವುದನ್ನು ಜನ್ನನ ಕಾವ್ಯದಲ್ಲಿ ನಾವು ನೋಡಬಹುದು. ಆದ್ದರಿಂದ ಜನ್ನನ ಕಾವ್ಯ 'ಅವನತಿಯ ಕಾಲಕ್ಕೆ ಹಿಡಿದ ಒಂದು ರೂಪಕ' (ಜಿ.ರಾಜಶೇಖರ) ಎಂಬ ಮಾತು ಸರಿ ಎನಿಸುತ್ತದೆ. ಈ ಒಟ್ಟು ಚರ್ಚೆಯ ಹಿನ್ನೆಲೆಯಲ್ಲಿ ಜನ್ನನ ಕಾವ್ಯದಲ್ಲಿ ಬದಲಾದ ಮನುಷ್ಯ ಕಂಡು ಬರುವುದೇ ಇಲ್ಲ ಎಂಬ ತೀರ್ಮಾನಕ್ಕೆ ಬರಬಾಕಾಗುತ್ತದೆ.

ವೈದಿಕ ಧರ್ಮದಲ್ಲಿ ಜೀವ ವಿರೋಧಿಯಾದ ಯಜ್ಞಯಾಗಾದಿಗಳನ್ನು ವಿರೋಧಿಸಿ, ವರ್ಣಾಶ್ರಮ ಕರ್ಮ ಸಿದ್ಧಾಂತಗಳನ್ನು ಅಲ್ಲಗಳೆದು ಮನುಷ್ಯನು 'ಮನುಷ್ಯ'ನಾಗಿ ಮತ್ತು ಮನುಷ್ಯ ಮನುಷ್ಯನನ್ನು ಮನುಷ್ಯನಂತೆ ಕಾಣುವ ವಿಧಾನವನ್ನು ಮೊದಲಿಗೆ ವಚನ ಸಾಹಿತ್ಯದಲ್ಲಿ ಕಾಣುತ್ತೇವೆ. ವ್ಯಕ್ತಿ ತಪಸ್ಸಿನಿಂದ ತನ್ನ ಮೋಕ್ಷವನ್ನು ಸಾಧಿಸಿಕೊಂಡರೆ ಸಾಲದು, ತನ್ನವರ ಮೋಕ್ಷವೂ ಆಗಬೇಕು ಎಂದು ಬಯಸಿದ 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಮೌಲ್ಯ ಜಾರಿಯಲ್ಲಿದ್ದ ಕಾಲದಲ್ಲಿ ಮನುಷ್ಯನ ಸರ್ವಸ್ವವೂ ಅವನಿಗೆ ಅರ್ಪಿತವಾಗಬೇಕಿದ್ದಿತು. ಅವನಿಗೆ ತನ್ನನ್ನು ತಾನೇ ಅರ್ಪಿಸಿಕೊಳ್ಳುತ್ತಿದ್ದ, ಅದು 'ವೀರಯುಗ' ಎಂದು ವೈಭವೀಕರಿಸಲಾಯಿತು. ಆದರೆ ಹನ್ನೆರಡನೇ ಶತಮಾನದಲ್ಲಿ ರಾಜನ ಸ್ಥಾನವನ್ನು 'ದೈವ' ಆಕ್ರಮಿಸಿತು. ಮನುಷ್ಯ ಮನುಷ್ಯನಿಗೆ ಆಳಾಗುವುದನ್ನು ವಚನಧರ್ಮ ನಿರಾಕರಿಸಿತು. ಒಟ್ಟಾರೆ ಕಾಯಕ ಮಾಡಿ ಬದುಕಬೇಕು. ಹಾಗೆ ಒಟ್ಟಿಗೆ ಕೂಡಿ ಬದುಕಲು ಒಂದು ಸೂತ್ರ ಬೇಕಾಗಿತ್ತು. ಆಗ ಅವರಿಗೆ ಶಿವಭಕ್ತಿ ಎಂಬ ಸೂತ್ರ ಸಿಕ್ಕಿತು. ಅದಕ್ಕೆ ತಮ್ಮನ್ನು ತಾವೇ ಕೋದುಕೊಂಡರು. ಇದೊಂದು ಐತಿಹಾಸಿ ಅನಿವಾರ್ಯವೊ ಎಂಬಂತೆ ಮೂಡಿ ಬಂದಿತು. ರಾಜ ಪ್ರಭುತ್ವಗಳು ಕಚ್ಚಾಡತೊಡಗಿ ಮನುಷ್ಯ ಸಮಾಜದ ನೆಮ್ಮದಿ ಭಂಗವುಟಂಟಾದಾಗ ಮನುಷ್ಯ ಮತ್ತೆ ಆಲೋಚಿಸಿದ. ನಮ್ಮ ವ್ಯವಸ್ಥೆಯಲ್ಲಿ ಏನೋ ದೋಷವಿದೆ ಎನಿಸಿತು. ಆಮೇಲೆ ಆ ದೋಷಗಳಿಗೆ ಪರಿಹಾರವನ್ನು ಹುಡುಕುವತ್ತ ಹೆಜ್ಜೆ ಹಾಕಿದ. ಜೈನ ಮತ್ತು ವೈದಿಕ ಧರ್ಮಗಳ ಟ್ರ್ಯಾಕ್‌ನಿಂದ ಭ್ರಮನಿರಸನಗೊಂಡ ಜನ ದೂರ ಸರಿಯುತ್ತಿದ್ದಾರೆ. ಅವರನ್ನು ಹಿಡಿದು ತಂದು ಮತ್ತೆ ತಮ್ಮ ಧರ್ಮದ ಭೋಗಿಗಳಿಗೆ ತುಂಬಿಕೊಳ್ಳಲು ಆಗ ಹವಣಿಸುತ್ತಿದ್ದವು. ಅಂಥ ಸಂದರ್ಭದಲ್ಲಿ ಬಂದ ವಚನಕಾರರು ಮನುಷ್ಯನ ಅಳುಕನ್ನು ಹೋಗಲಾಡಿಸಿ ಅವನಲ್ಲಿ ಘನತೆಯನ್ನು ತುಂಬಲು ಯತ್ನಿಸಿದರು. ಮನುಷ್ಯ ಮನುಷ್ಯನಿಗೆ 'ಜೀಯ ಹಸಾದ' ಎಂದು ಹೇಳುವ ದೈನ್ಯತೆಯನ್ನು ಹೋಗಲಾಡಿಸಿ 'ಏನು ಬಂದಿರಿ ಹದುಳವಿದ್ದಿರಿ' ಎಂದು ಕೇಳುವ ಮಾನವ ಮರ್ಯಾದೆಯನ್ನು ವಚನಕಾರರು ತಂದುಕೊಟ್ಟರು. ಸಮಾನ ಕಾಯಕ, ಸಮಾನ ಗೌರವದ ಆಧಾರದ ಮೇರೆಗೆ ಎಲ್ಲರೂ ಮಾನವಂತರಾಗಿ, ಸಾಮೂಹಿಕವಾಗಿ ಬದುಕಲು ಸಾಧ್ಯವಾಯಿತು. ಹೀಗೆ ಹನ್ನೆರಡನೇ ಶತಮಾನದಲ್ಲಿ ಸಾಮಾಜಿಕವಾಗಿ ಮನುಷ್ಯ ಬದಲಾದ ಬದಲಾವಣೆಯಲ್ಲಿ ಎರಡು ವಿಧ : ಒಂದು ಧನಾತ್ಮಕ (Positive)

ಇನ್ನೊಂದು ಋಣಾತ್ಮಕ (Negatvie); ವಚನ ಯುಗದಲ್ಲಿ ಮನುಷ್ಯನ ಬದಲಾವಣೆ 'ಧನಾತ್ಮಕವಾಗಿತ್ತು' ಎಂದು ಹೇಳಬೇಕಾಗುತ್ತದೆ.

ಒಂದು ಸಮಾಜದ ಬದುಕನ್ನು ಸರಿಪಡಿಸಬೇಕಾದರೆ ಮೂಢನಂಬಿಕೆಗಳಲ್ಲಿ ಸಂಪ್ರದಾಯಗಳ ಬಂಡವಾಳ ಶಾಹಿಗಳ ಹಿಡಿತದಲ್ಲಿ, ಜಾತಿಮತ ಭೇದಗಳ ಹಿಡಿತದಲ್ಲಿ ನಲುಗುತ್ತಿರುವ ಜನ ಸಾಮಾನ್ಯರನ್ನು ಉದ್ಧರಿಸಬೇಕಾದರೆ ಅವರ ಭಾವನೆಗಳನ್ನು ಅರ್ಥೈಸಿಕೊಂಡು ಆ ಮೂಲಕ ಅವರನ್ನು ಚಿಕಿತ್ಸೆಗೊಳಪಡಿಸಬೇಕೆಂಬುದು ವಚನಕಾರರ ಉದ್ದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಮೂಡಿ ಬಂದ ವಚನ ಸಾಹಿತ್ಯ ಹೊಸ ರೀತಿಯ ಸಾಮಾಜಿಕ ಮನುಷ್ಯನ ಪರಿಶೋಧನೆಯನ್ನೇ ನಡೆಸಿಬಿಟ್ಟಿತು. ಬಸವಣ್ಣ ಶಿವನೇ ದೇವರು ಎಂದು ಒತ್ತಿ ಹೇಳುತ್ತ ಪ್ರಾದೇಶಿಕ ದೇವರುಗಳ ಪೂಜೆಯನ್ನು ಬಿಡಿಸಿದ್ದರಿಂದ ಎಲ್ಲರೂ ಶಿವನ ಭಕ್ತರಾದರು. ಆ ಮುಖಾಂತರ ನಾವೆಲ್ಲ ಒಂದೇ ಎಂಬ ಆತ್ಮವಿಶ್ವಾಸ ಅವರಲ್ಲಿ ಮೂಡಿತು. ಹುಟ್ಟಿನಿಂದಲೇ ಮೇಲು ಕೀಳು ಎಂದು ನಿರ್ಧರಿಸುತ್ತಿದ್ದ ಜಾತಿಪರಂಪರೆಯನ್ನು ಧಿಕ್ಕರಿಸಿದ ವಚನಕಾರರು ಶಿವೋಪಾಸನೆಯ ತತ್ವಗಳನ್ನು ಪ್ರಧಾನವಾಗಿ ಪಾಲಿತತೊಡಗಿದರು. ಇವು ಹನ್ನೆರಡನೇ ಶತಮಾನದ ಸಾಮಾಜಿಕ ಮನುಷ್ಯನ ಮುಖ್ಯ ಗುರಿಗಳಾದವು. 'ಕೊಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ' (ಬವಣ್ಣನವರ ಷಟ್‌ಸ್ಥಲ ವಚನಗಳು, ವಚನ : ೫೯೦) ಎಂದು ಹೇಳುವ ರೂಢಮೂಲವಾದ ಜಾತಿಪದ್ಧತಿಯನ್ನೇ ತಲೆ ಕೆಳಗೆ ಮಾಡುವ ಹೊಸ ಪರಿಕಲ್ಪನೆ ವಚನ ಸಾಹಿತ್ಯದ ಮೌಲಿಕಾಂಶವಾಯಿತು. ಹೊಲಗೇರಿ ಮತ್ತು ಶಿವಾಲಯ – ಇವೆರಡೂ ಇರವುದು ಈ ನೆಲದ ಮೇಲೇ. ಮಲ ತೊಳೆಯಲಿಕ್ಕೆ ಪೂಜೆ ಮಾಡಲಿಕ್ಕೆ ಬಳಸುವುದು ಒಂದೇ ನೀರನ್ನು. ಆದ್ದರಿಂದ ತನ್ನನ್ನು ತಾನು ಯಾರು ಅರ್ಥಮಾಡಿಕೊಳ್ಳುತ್ತಾರೋ ಅಂಥವರಿಗೆ ಅನೇಕ ಕುಲಗಳಿಲ್ಲ, ಇರುವುದೊಂದೇ ಕುಲ ಎನ್ನುತ್ತಾರೆ ಬಸವಣ್ಣ. ಕಬ್ಬಿಣ ಕಾಯಿಸಿ ಕಮ್ಮಾರನಾದ, ವೇದಾಭ್ಯಾಸ ಮಾಡಿ ಹಾರುವನಾದ, ಕಿವಿಯಲ್ಲಿ ಹುಟ್ಟಿದವರು ಯಾರೂ ಇಲ್ಲ, ಎಲ್ಲ ಮಕ್ಕಳೂ ಹೊಲೆಯನ್ನು ಕಾಣಲೇಬೇಕು, ಪರಿಸ್ಥಿತಿ ಹೀಗಿರುವಾಗ ಮನುಷ್ಯರೆಲ್ಲ ಒಂದೇ ಎಂಬ ತೀರ್ಮಾನಕ್ಕೆ ಬರುವುದೇ ಮಾನವೀಯತೆಯ ಲಕ್ಷಣ ಎನ್ನುತ್ತಾನೆ.

> ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ
> ಸತ್ಯವ ನುಡಿವುದೆ ದೇವಲೋಕ
> ಮಿಥ್ಯವ ನುಡಿವುದೆ ಮರ್ತ್ಯಲೋಕ
> ಆಚಾರವೇ ಸ್ವರ್ಗ ಅನಾಚಾರವೇ ನರಕ
> ಕೂಡಲಸಂಗಮದೇವಾ ನೀವೇ ಪ್ರಮಾಣ

ಇಲ್ಲಿ ವ್ಯಕ್ತಿಯ ವ್ಯಕ್ತಿತ್ವದಲ್ಲಿಯೇ 'ಕಾಣದ ಲೋಕ'ಗಳನ್ನು ಕಾಣುವ ಹೊಸ ವಿಧಾನವಿದೆ. ಭೂಮಿಯ ಮೇಲೆ ದಿನನಿತ್ಯ ಮನುಷ್ಯರು ಅನುಭವಿಸುವಂಥವು ಎಂಬ ಸಂಗತಿ ಖಚಿತಗೊಂಡಿದೆ. ಸಂಪತ್ತಿನ ಕುರುಹಾಗಿ ರಾಜರು ದೇವಾಲಯಗಳನ್ನು

ಕಟ್ಟಿಸುತ್ತಿದ್ದರು. ಅದರೊಳಕ್ಕೆ ಅಸ್ಪೃಶ್ಯರು ಬರಬಾರದೆಂಬ ವಿರೋಧವೂ ಇತ್ತು. ಇದನ್ನು ಗಮನಿಸಿದ ವಚನಕಾರರು ಅಸ್ಪೃಶ್ಯರಿಗೇ ಪ್ರವೇಶವಿಲ್ಲದ ಈ ದೇವಾಲಯಗಳೇ ಬೇಡವೆಂದರು. ದೇವರ ಕಲ್ಪನೆಯನ್ನೇ ಬೇರು ಸಹಿತ ಕಿತ್ತು ಒಗೆದಂತಾಯಿತು. ಇಂಥದೇ ಸಮಸ್ಯೆಯನ್ನು ತುಂಬಿಕೊಂಡಿರುವ ಬಸವಣ್ಣನ ವಚನವೊಂದು ಹಸಿ ಅನುಭವವನ್ನು ನೀಡುತ್ತದೆ : 'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡುವೆ ಬಡವನಯ್ಯಾ, ಎನ್ನ ಕಾಲೇ ಕಂಬ ದೇಹವೇ ದೇಗುಲ, ಶಿರವೆ ಹೊನ್ನ ಕಳಸವಯ್ಯ'. ಈ ಪರಿಕಲ್ಪನೆ ಪರಂಪರಾಗತವಾಗಿದ್ದ ದೇವಸ್ಥಾನದ ಕಲ್ಪನೆಗಿಂತ ಬೇರೆಯಾಗಿದ್ದು, ಮಾನವನನ್ನೇ ಕೇಂದ್ರೀಕರಿಸಿಕೊಂಡಿರುವುದನ್ನು ಗಮನಿಸಬಹುದು. 'ಮನೆಂಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ, ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ' ಎಂಬಲ್ಲಿ ಮನುಷ್ಯನ ಅಂತರಂಗದ ಹುಡುಕಾಟ ಪ್ರಧಾನವಾಗಿದೆ. ರಜ ತುಂಬಿದ ಮನೆಯನ್ನು ವ್ಯಕ್ತಿತ್ವ ರೂಪಿಸಿಕೊಳ್ಳದ ಮನುಷ್ಯನಿಗೆ ಹೋಲಿಸಲಾಗಿದೆ. ಮನುಷ್ಯನ ಅಂತರಂಗ ಬಹಿರಂಗದ ಸಮನ್ವಯದ ಕಡೆ ಬಸವಣ್ಣ ಹೆಚ್ಚು ಮುತುವರ್ಜಿ ವಹಿಸುತ್ತಾನೆ. ಹಾಗೆಯೇ 'ಲೋಕದ ಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂಬಲ್ಲಿ ದ್ವಿಮುಖ ನೀತಿಯ ಮನುಷ್ಯನನ್ನು ವಿಡಂಬಿಸಿದ್ದಾನೆ. ಮನುಷ್ಯ ವ್ಯಕ್ತಿತ್ವವನ್ನು ಕಳೆದುಕೊಂಡಿದ್ದಾನೆ ಎಂಬ ಕಾರಣದಿಂದ ಬಸವಣ್ಣ ಮನುಷ್ಯನ ವ್ಯಕ್ತಿತ್ವಕ್ಕೆ ಪ್ರಾಮುಖ್ಯತೆ ನೀಡಿದ್ದಾನೆ.

ಅಕ್ಕ ಮಹಾದೇವಿಯಂಥ ಹೆಣ್ಣು ಗಂಡನನ್ನು ಧಿಕ್ಕರಿಸಿ ಹೊರಬಂದ ವಿಚಾರ ಮಹತ್ವದ್ದೇ. ಅವಳ ಒಂಟಿ ಬದುಕು ಹಲವಾರು ತೊಂದರೆಗಳಿಗೆ ಆಸ್ಪದವಾಗಿರಬೇಕು. ನಿರೀಕ್ಷಿಸದ ಮಾತುಗಳನ್ನು ಕೇಳಿರಬೇಕು. ಅಂಥವರಿಗೆ "ಶೀಲ ಶೀಲ ಎಂತೆಂಬಿರಯ್ಯ, ಶೀಲದ ನೆಲೆಯ ಬಲ್ಲಡೆ ಹೇಳಿರೋ' ಎಂದು, "ಹಣ್ಣಮೆದ್ದ ಬಳಿಕ ಆ ಮರನ, ಆರು ತರಿದರೇನು? ಹೆಣ್ಣ ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು?"– ಇತ್ಯಾದಿಯಾಗಿ ಸವಾಲು ಹಾಕಿದ್ದಾಳೆ. ತನ್ನನ್ನು ಹಿಂಬಾಲಿಸುತ್ತಿದ್ದ ಗಂಡಸರಿಗೆ "ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ ಎನ್ನನೇಕೆ ನುಡಿಸುವಿರಿ ಅಣ್ಣಗಳಿರಾ? ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ? ಬಲು ಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ" ಎಂಬುದಾಗಿ ಉತ್ತರಿಸಿದ್ದಾಳೆ. ಹಲವಾರು ಕಷ್ಟಗಳನ್ನು ಅನುಭವಿಸಿದ್ದರೂ "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ, ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು" ಎಂಬ ಮನೋಧರ್ಮವನ್ನು ಪ್ರಕಟಪಡಿಸುತ್ತಾಳೆ. ಅಲ್ಲದೆ "ಹಸಿವಾದೊಡೆ ಊರೊಳಗೆ ಭಿಕ್ಷಾನ್ನಗಳುಂಟು, ತೃಷೆಯಾದರೆ ಕೆರೆಬಾವಿ ಹಳ್ಳಗಳುಂಟು, ಶಯನಕೆ ಹಾಳು ದೇಗುಲವುಂಟು, ಚನ್ನಮಲ್ಲಿಕಾರ್ಜುನ ಆತ್ಮಸಂಗಾತಕ್ಕೆ ನೀನೆನಗುಂಟು" ಎಂಬ ದೃಢ ನಿರ್ಧಾರ ಅಕ್ಕನದು. ಹೀಗೆ ಸಾಂಸಾರಿಕ ಬಂಧನ, ಭಕ್ತಿ, ಧರ್ಮ, ಮಾಯೆ ಇವುಗಳನ್ನು ಬಿಟ್ಟರೆ ಹೆಚ್ಚು ಆವರಿಸಿರುವುದು ಚೆನ್ನಮಲ್ಲಿಕಾಜುನನ ಅರಸುವಿಕೆಯ ಧ್ವನಿಯಾಗಿದೆ. ಈಕೆಯ ಪ್ರಕಾರ ಮಾನವ ಪ್ರೇಮ ಬಾಂಧವ್ಯ ಈ

ನೆಲದ ಮೇಲೆ ಸಾಧ್ಯವಾಗಬೇಕಿತ್ತು. ಆದರೆ ಅದು ಸಾಧ್ಯವಾಗಿಲ್ಲ. ಅಂಥ ಕೊರತೆಯೊಂದನ್ನು ಪ್ರತ್ಯೇಕ ವಾತಾವರಣದಲ್ಲಿ ಅರಸುವ ಪ್ರಕ್ರಿಯೆ ಕಂಡು ಬರುತ್ತದೆ. ಇದೇ ಅಕ್ಕನಲ್ಲಿ ಕಂಡು ಬರುವ ಮನುಷ್ಯನ ಪರಿಕಲ್ಪನೆ.

ಇನ್ನು ಅಲ್ಲಮ ಪ್ರಭು ಇಡೀ ಭಾರತದಲ್ಲಿಯೇ ದೊಡ್ಡ ಅನುಭಾವಿ. ಯಾವುದೇ ಒಳತೋಟಿ ಅವನಲ್ಲಿಲ್ಲ. ಸಾಧಕ ಹಂತಗಳನ್ನು ದಾಟಿರುವ ಸಿದ್ಧಪುರುಷ. ಎಲ್ಲ ವಚನಕಾರರಿಗಿಂತ ವಾಸ್ತವ ವಿಚಾರಗಳನ್ನು ಹೇಳಿದವನು. ಬಸವಣ್ಣನ ಭಾವಾವೇಶವಾಗಲೀ ಅಕ್ಕಮಹಾದೇವಿಯ ಮುಗ್ಧತೆಯಾಗಲೀ ಅಲ್ಲಮನ ವಚನಗಳಲ್ಲಿ ಕಂಡು ಬರುವುದಿಲ್ಲ. ಮನುಷ್ಯ ಸಂಬಂಧಗಳನ್ನು ಮೀರುವುದರ ಬಗ್ಗೆ (ಮೀರುವುದು ಎಂದರೆ ಎಲ್ಲವನ್ನು ಒಳಗೊಳ್ಳುವುದೇ ಎಂದರ್ಥ) ಆಲೋಚಿಸಿದವನು. ಅಲ್ಲಮನ ಕಲ್ಪನೆಯ ಮನುಷ್ಯ ಜಂಗಮ. ಜಂಗಮನಿಗೆ ಜಾತಿಗುಣವಿಲ್ಲ. ಪದದ, ಪದವಿಯ ಇಚ್ಛೆಯಿಲ್ಲ, ಛಲವಿಲ್ಲ. ಎಲ್ಲಕ್ಕೂ ಅತೀತವಾದವನು. ಮನುಷ್ಯ ಸಹಜ ಸ್ಥಿತಿಯನ್ನು ಮುಟ್ಟುವುದೇ ಒಂದು ಸ್ವಯಂ ಸಾಧನೆ. ಒಂದು ಎರಡಾಗುವುದು ಎರಡು ಒಂದುಗೂಡುವುದೇ ಮನುಷ್ಯನ ಗುರಿ (ಶಿವತತ್ವ ಅಂಗ ಲಿಂಗವಾಗುವುದು, ಲಿಂಗಾಂಗ ಸಾಮರಸ್ಯವೇ ಅದರ ಮುಖ್ಯ ಗುರಿ.) ಬ್ರಹ್ಮ ಸಾಕ್ಷಾತ್ಕಾರವೇ ಮನುಷ್ಯನ ಗುರಿ. (ಯೋಗಿಯಾದಡೇನು ಭೋಗಿಯಾದಡೇನು ಸನ್ಯಾಸಿಯಾದಡೇನು ಸಂಸಾರಿಯಾದಡೇನು). ಮನುಷ್ಯನಾಗಿರುವವನು ಸದಾ ಸಾಧನೆಯಲ್ಲಿ ತೊಡಗಿಸಬೇಕು. ಅಂದರೆ ಸಾಯುವತನಕ ಮನುಷ್ಯ ಸಾಧನೆಯಲ್ಲಿಯೇ ನಿರತನಾಗಿರಬೇಕು ಎಂದು ಅರ್ಥವಲ್ಲ. ಆತ ಜೀವಿತ ಕಾಲದಲ್ಲಿಯೇ ಸಿದ್ಧಿ ಪಡೆಯಬೇಕು. ಇಂದ್ರಿಯಗಳಿಗೆ ಹಿಂಸೆ ಕೊಡಬಾರದು. 'ಸಾಯದ ನೋಯದ ಸ್ವತಂತ್ರ ಸಾಧನೆಯಿಂದ ಸಹಜ ಸ್ಥಿತಿ ಮುಟ್ಟುವುದೇ' ಅಲ್ಲಮನ ಮನುಷ್ಯನ ಪರಿಕಲ್ಪನೆ. ಸಿದ್ಧಿ ಪಡೆದ ನಂತರ ಲಿಂಗಪೂಜೆ ಮೊದಲಾದ ಧಾರ್ಮಿಕ ವಿಧಿಗಳನ್ನು ಮುಂದುವರಿಸಬೇಕು ಎಂದು ಅಲ್ಲಮ ಹೇಳುತ್ತಾನೆ. ಸಾಧನೆಯಲ್ಲಿ Rituals ಅನ್ನು ನಿರಾಕರಿಸುತ್ತಾನೆ. ಮತ್ತೆ ಅವುಗಳನ್ನೇ ಎತ್ತಿ ಹಿಡಿಯುತ್ತ ಪೂರ್ಣವಾಗಿ ನಿರಾಕಾರದ ಹಂತಕ್ಕೆ ಹೋಗಿ ಮಾತನಾಡುತ್ತಾನೆ. ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವವನು ಮನುಷ್ಯನೇ ಹೊರತು Rituals ಅಲ್ಲ, ಇದೆಲ್ಲ ಬಾಹ್ಯ ಪ್ರಪಂಚಕ್ಕಷ್ಟೇ ಹೊರತು ಅಂತರಂಗಕ್ಕಲ್ಲ. ಇಂಥ ವ್ಯಕ್ತಿತ್ವ ವಿಶ್ಲೇಷಣೆಯ ಸಂದರ್ಭದಲ್ಲಿ ಅಲ್ಲಮ ಬಸವನಿಗಿಂತ ಭಿನ್ನವಾಗಿ ಕಂಡು ಬರುತ್ತಾನೆ. ಜೀವನದ ಸಾಮಾಜಿಕ ವಿಷಯಗಳಿಗೆ ಹೆಚ್ಚು ಮಾಹಿತಿ ಇಲ್ಲ ಅಲ್ಲಮನಲ್ಲಿ, ಆದರೆ ಬಸವನಲ್ಲಿ ಹೊಸ ಸಮಾಜ ಕಟ್ಟುವ ಬಯಕೆ ಇದೆ. 'ಅನುಭವ' ಎಂಬುದು ಅಲ್ಲಮನ ಪ್ರಕಾರ 'individual' ಈ ಹಿನ್ನೆಯಲ್ಲಿ ನೋಡಿದಾಗ. ಆತನ ಮನುಷ್ಯನ ಕಲ್ಪನೆ 'highly individual' ಆಗಿ ಕಂಡು ಬರುತ್ತದೆ. ಈವರೆಗಿನ ಅಧ್ಯಯನದ ಪ್ರಕಾರ ಬಸವಣ್ಣ, ಅಕ್ಕ ಮಹಾದೇವಿ, ಅಲ್ಲಮಪ್ರಭು – ಈ ಮೂವರೂ ತಮ್ಮ ಪರಸ್ಪರ ಆಲೋಚನೆಯಲ್ಲಿ ಭಿನ್ನರಾಗಿದ್ದಾರೆ. ಬಸವಣ್ಣನ ವಚನಗಳಲ್ಲಿ ಕಾಣುವ ಮನುಷ್ಯ ಈ ಲೋಕದ ಬದುಕನ್ನು ಪ್ರೀತಿಸಿದವನು, ಇಲ್ಲಿಯೇ ನೆಲೆಯೂರಬೇಕೆಂದು ಬಯಸಿದವನು. ಅಕ್ಕಮಹಾದೇವಿಯಲ್ಲಿ ತಾನು ಭಾವಿಸಿದ ಮಾನವ ಪ್ರೇಮ ಸಂಬಂಧ

ಯಾವಾಗ ಈ ನೆಲದಲ್ಲಿ ಗೋಚರವಾಗಲಿಲ್ಲವೋ ಆಗಿನಿಂದ ಅಂಥ ಪ್ರೇಮ ಸಂಬಂಧವನ್ನು ಇನ್ನೊಂದು ವಾತಾವರಣದಲ್ಲಿ ಪತ್ತೆ ಹಚ್ಚುವ ಪ್ರಯತ್ನ ಕಂಡು ಬರುತ್ತದೆ. ಆದರೆ ಅಲ್ಲಮನ ಮನುಷ್ಯ ಲೌಕಿಕದಿಂದ ಅತೀತನಾಗಬೇಕೆಂದು ಬಯಸಿದವನು. "ಬಸವಣ್ಣ ಹಾಗೂ ಅಕ್ಕಮಹಾದೇವಿಯ ವಚನಗಳಲ್ಲಿ ಮನುಷ್ಯನ ಅಸ್ತಿತ್ವವನ್ನು ಕುರಿತ ಆಲೋಚನೆಗಳು ಅವರದೇ ಆದ ವೈಯಕ್ತಿಕ ಅಭೀಪ್ಸೆಯ ತೊಳಲಾಟ ಹಾಗೂ ಆತಂಕಗಳೆನ್ನುವಂತೆ ತೋರುತ್ತದೆ. ಅಂದರೆ ಕೂಡಲಸಂಗನನ್ನು ಕುರಿತಂಥ ಬಸವಣ್ಣನ ಅನುಭಾವದ ಆಶಯವಾಗಲೀ ಇದರ ಸಾಧನೆಯ ಹಂತದ ತೀವ್ರ ತೊಳಲಾಟಗಳನ್ನು ಹೇಳುತ್ತದೆ. ತನ್ನ ಕಾಲದ ಮನುಷ್ಯನ ಹೊಸ ಅಸ್ತಿತ್ವವನ್ನು ಬಸವಣ್ಣನು ಭಕ್ತನ ಬೆಳವಣಿಯಲ್ಲಿ ಕಾಣಲು ಪ್ರಯತ್ನಿಸಿದ. ತಾನೇ ಸ್ವತಃ ಭಕ್ತನೊಬ್ಬನ ಎಲ್ಲ ಆತಂಕಗಳ ಮೂಲಕ ಬೆಳೆಯಲು ಪ್ರಯತ್ನಿಸಿದ. ಭಕ್ತನಾಗುವ ಮುನ್ನ ವ್ಯಕ್ತಿಯ ಅಂತರಂಗ ಬಹಿರಂಗಗಳ ಶುದ್ಧತೆಯ ಬೆಗೆಗಿನ ತೀವ್ರ ಕಾಳಜಿ ಇವನ ವಚನಗಳ ಮುಖ್ಯ ಭಿತ್ತಿಯಾಗಿತ್ತು ಎನ್ನಬಹುದು.

ಅಕ್ಕ ಮಹಾದೇವಿಯು ಹೆಣ್ಣಿನ ಬದುಕಿನ ಸ್ವಾತಂತ್ರ್ಯದ ಪರಿಧಿಗಳನ್ನು ವಿಸ್ತರಿಸಲು ಆಶಿಸಿದವಳು. ಇವರಿಬ್ಬರ ವಚನಗಳಲ್ಲಿ ಮನುಷ್ಯನ ಅಸ್ತಿತ್ವದ ಸ್ವರೂಪವು ಅವರ ಅನುಭವದ ಭಾಗವಾಗಿಯೇ ರೂಪುಗೊಳ್ಳುತ್ತದೆ. ಆದರೆ ಅಲ್ಲಮನ ವಚನಗಳು ಸಿದ್ಧನೊಬ್ಬನ ಅವಸ್ಥೆಯನ್ನು ಪ್ರಧಾನವಾಗಿ ಸೂಚಿಸುತ್ತದೆ"[೨]

"ಬಸವಣ್ಣ ಹಾಗೂ ಅಕ್ಕಮಹಾದೇವಿ ಇವರಿಬ್ಬರ ವಚನಗಳಲ್ಲಿಯೂ ಮನುಷ್ಯನ ಅಸ್ತಿತ್ವದ ಪ್ರಧಾನ ಸ್ವರೂಪವು ದ್ವೈತ ಭಾವವನ್ನು ಒಳಗೊಂಡಿದೆ. ಅಂದರೆ ಇಲ್ಲಿ ಕೂಡಲಸಂಗಮನಾಗಲೀ ಚನ್ನಮಲ್ಲಿಕಾರ್ಜುನನಾಗಲೀ ತನಗಿಂತ ಭಿನ್ನವಾದ್ದು, ಬೇರೆಯದು ಎನ್ನುವ ಭಾವವು ಇಲ್ಲಿ ಮುಖ್ಯವಾದದ್ದಾಗಿದೆ. ಹೀಗಾಗಿ ಈ ಸಂಬಂಧದಲ್ಲಿ ಒಂದು ಇನ್ನೊಂದರ ಮೇಲೆ ಅಧೀನವಾಗಿರುವ ಲಕ್ಷಣವು ಕಂಡು ಬರುತ್ತದೆ. ಆದರೆ ಅಲ್ಲಮನ ವಚನಗಳಲ್ಲಿ ಈ ಭಾವವು ದ್ವೈತ ಸ್ವರೂಪದ್ದಲ್ಲವೇ ಅಲ್ಲ. ಅಲ್ಲಮನ ವಚನಗಳು ಮನುಷ್ಯನಲ್ಲೇ ಉಂಟಾಗುವ ಪರಿಪೂರ್ಣತೆಯನ್ನು ಆಶಿಸುವ ಕಡೆಗೆ ಹೆಚ್ಚು ಒತ್ತು ಕೊಡುತ್ತವೆ." ಕನ್ನಡ ಸಾಹಿತ್ಯದಲ್ಲಿ ರಗಳೆಗೆ ಮುನ್ನ ಚಂಪು, ವಚನಪ್ರಕಾರಗಳು ವಿಜೃಂಭಿಸಿದವು. ಹಳಗನ್ನಡ ಕೃತಿಗಳನ್ನು ರಚಿಸಿದವರಲ್ಲಿ ಜೈಮತದ ಲೇಖಕರೇ ಮೊದಲಿಗರು. ಪಂಪ, ಪೊನ್ನ, ರನ್ನ ಮೊದಲಾದವರು ಜೈನ ಪುರಾಣ, ರಾಮಾಯಣ ಮತ್ತು ಮಹಾಭಾರತಗಳಿಂದ ವಸ್ತುವನ್ನಾರಿಸಿಕೊಂಡು ಕಾವ್ಯ ರಚಿಸಿದರು. ಅವು ಬಂದದ್ದು ಚಂಪು ಪ್ರಕಾರಗಳಲ್ಲಿ. ಇವರ ನಂತರದವರಾದ ಚಾವುಂಡರಾಯ, ಒಂದನೇ ನಾಗವರ್ಮ, ದುರ್ಗಸಿಂಹ, ನಾಗಚಂದ್ರ, ನಯಸೇನ, ಬ್ರಹ್ಮಶಿವ, ಮುಂತಾದವರು ಇದೇ ಮಾರ್ಗವನ್ನು ಅನುಸರಿಸಿರುವುದರ ಜೊತೆಗೆ ಸಂಸ್ಕೃತಗ್ರಂಥಗಳಿಂದಲೂ ವಸ್ತುವನ್ನು ಪಡೆದರು. ಹೀಗೆ ಈ ಕಾಲಘಟ್ಟದ ಪ್ರತಿಯೊಬ್ಬ ಕವಿಯೂ ರಾಮಾಯಣ, ಮಹಾಭಾರತ, ಪುರಾಣ ಪ್ರಸಿದ್ಧ ಗ್ರಂಥಗಳನ್ನು ಆಶ್ರಯಿಸಿದರು. ಬೇರೆ ಮೂಲದಿಂದ ವಸ್ತುವನ್ನು ಪಡೆಯುವುದು, ಅವರಿಗೆ ತಿಳಿದಿರಲಿಲ್ಲವೆಂದಲ್ಲ. ಅದು ಆಕಾಲದ ಒತ್ತಡ ಮತ್ತು ಅನಿವಾರ್ಯತೆ ಆಗಿತ್ತು.

ಬಹುತೇಕ ಕವಿಗಳು ರಾಜಾಶ್ರಯವನ್ನು ಹೊಂದಿದ್ದು ನಾಯಕ ಪಾತ್ರವನ್ನು ಆಶ್ರಯದಾತನೊಂದಿಗೆ ಸಮೀಕರಿಸಿ ಕಾವ್ಯ ಬರೆದರು. ಪುರಾಣ ರೂಪದ ಕಥೆಗೆ ವರ್ತಮಾನದ ಸ್ಪರ್ಶ ನೀಡಿದರು. ಇದು ಆಕಾಲದ ಅನಿವಾರ್ಯವೆನ್ನಬಹುದು.

ಮಧ್ಯಕಾಲೀನ ಕಾಲಘಟ್ಟಕ್ಕೆ ಬಂದರೆ ರಾಜರು ಮತ್ತು ಪುರಾಣಗಳು ವಸ್ತುವಾಗಿದ್ದ ಕಾಲ ಮುಗಿದು ಜನಸಾಮಾನ್ಯ ಯುಗ ಆರಂಭವಾಗಿದ್ದನ್ನು ಗುರುತಿಸಬಹುದು. ಕಥನವು ಪ್ರಮುಖವಾಗಿದ್ದ ಸಾಹಿತ್ಯ ಮರೆಯಾಗಿ ವೈಯಕ್ತಿಕ ಅನುಭವ ಪ್ರಧಾನವಾದ ವಚಗಳು ಹುಟ್ಟಿಕೊಂಡಿದ್ದವು. ಪ್ರಭುತ್ವವಿರೋಧಿ ಧೋರಣೆ ನೇರವಾಗಿ ಕಾಣಿಸತೊಡಗಿತ್ತು. ರಾಜನಿಗಿಂತ, ಆತನು ಕೊಡುವ ಲಾಭಕ್ಕಿಂತ ವೈಯಕ್ತಿಕವಾಗಿ ದೈವಸಾಕ್ಷಾತ್ಕಾರದಿಂದ ಪಡೆದ ಸಂಪತ್ತು ದೊಡ್ಡದು ಎಂಬ ಭಾವನೆ ಮೂಡಿತ್ತು. ವಿವಿಧ ಕಸುಬುಗಳ ಜನ ತಮ್ಮ ತಮ್ಮ ಅನುಭವಗಳನ್ನು ಮೊದಲಬಾರಿಗೆ ಅಭಿವ್ಯಕ್ತಗೊಳಿಸತೊಡಗಿದರು. ಧರ್ಮಕ್ಕಿಂತ ಭಕ್ತಿಗೆ ಪ್ರಾಧಾನ್ಯ ಸಂದಿತ್ತು. ವೈದಿಕ ಧರ್ಮದಲ್ಲಿದ್ದಂತಹ ಜಾತಿ ಪದ್ಧತಿ, ಅಸ್ಪೃಶ್ಯತೆ, ಮಡಿ-ಮೈಲಿಗೆ, ಪುನರ್ಜನ್ಮ, ಸ್ವರ್ಗ ನರಕ- ಮುಂತಾದ ಕಲ್ಪನೆಗಳು ಯಜ್ಞಯಾಗಾದಿಯಂತಹ ಆಚರಣೆಗಳು ವಿಮರ್ಶೆಗೆ ಒಳಪಟ್ಟಿದ್ದವು. ಅಗತ್ಯವಾಗಿ ತಿಳಿದುಕೊಳ್ಳಬೇಕಾದ ಸಂಗತಿ ಧರ್ಮಕ್ಕಿಂತಲೂ ಮನುಷ್ಯ ಪ್ರಜ್ಞೆಯೆಂಬ ಧೋರಣೆ ವಚನಗಳಲ್ಲಿ ವ್ಯಕ್ತಗೊಂಡಿತ್ತು.

ಹೀಗೆ ಚಂಪು ಮತ್ತು ವಚನ-ಈ ಎರಡು ಪರಂಪರೆಗಳಿಗಿಂತ ವಸ್ತುವಿನ ಆಯ್ಕೆಯಲ್ಲಿ ವಿಶಿಷ್ಟತೆಯನ್ನು ತೋರಿದವನು ಹರಿಹರ. ಸ್ವತಂತ್ರ ಮನೋವೃತ್ತಿಯವನು. ಯಾವುದೇ ಮುಲಾಜಿಗೆ ಒಳಗಾಗದ ಈತ ಆರಂಭದಲ್ಲಿ. 'ಗಿರಿಜಾಕಲ್ಯಾಣ' ಎಂಬ ಚಂಪುಕಾವ್ಯವನ್ನು ಬರೆದ. ಆ ಸಂದರ್ಭದಲ್ಲಿ ಒಣಪಾಂಡಿತ್ಯದ ಹಮ್ಮು ಆತನಗಿದ್ದಿರಬೇಕು. ಕಾಲಕ್ರಮದಲ್ಲಿ ಆ ಮನೋಧರ್ಮದಿಂದ ಆತ ಹೊರಬಂದಿರಬೇಕು. "ಮನಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ತನತನಗಿಂದ್ರ – ಚಂದ್ರ – ರವಿ – ಕರ್ಣ ದಧೀಚಿ- ಬಲೀಂದ್ರನೆಂದು/ ತಾನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ/ನೆನೆ ಪೊಗಳರ್ಚಿಸು ನಮ್ಮ ಕಡುಸೊಂಪಿನ ಹಂಪೆಯಾಳ್ದನಂ", ಪ್ರತಿಷ್ಠೆಗಾಗಿ, ಹೆಸರಿಗಾಗಿ ಅಧಿಕಾರದಲ್ಲಿರುವವರನ್ನು ಹೊಗಳಿ ಕಾವ್ಯ ಬರೆದರೆ ಅದು ಹೀನಕಾರ್ಯವಾಗುತ್ತದೆಂದ. ಹರಿಹರ ಜಗತ್ತಿನ ಉದ್ಧಾರಕ್ಕೆ ಕಾರಣನಾದ ಶಿವ ಮತ್ತು ಶಿವ ಭಕ್ತರನ್ನು ಕುರಿತು ಸಂತಸದಿಂದ ಕಾವ್ಯ ರಚಿಸಬೇಕೆಂಬ ನಿಲುವನ್ನು ವ್ಯಕ್ತಗೊಳಿಸಿದ. ಹಾಗಾಗಿ ಗಿರಿಜಾ ಕಲ್ಯಾಣದ ಸಂತಸದಿಂದ ಕಾವ್ಯ ರಚಿಸಬೇಕೆಂಬ ನಿಲುವನ್ನು ವ್ಯಕ್ತಗೊಳಸಿದ. ಹಾಗಾಗಿ ಗಿರಿಜಾ ಕಲ್ಯಾಣದ ನಂತರ ಹೊಸ ರೀತಿಯಲ್ಲಿ ಕಾವ್ಯ ರಚಿಸುವ ಅನಿವಾರ್ಯತೆ ಆತನಿಗೆ ಒದಗಿಬಂತು. ಯಾಕೆಂದರೆ ಆ ವೇಳೆಗಾಗಲೇ ಸಂಸ್ಕೃತ ಕಾವ್ಯದ ಸವೆದ ಜಾಡನ್ನು ಅನುಕರಿಸುವುದರಲ್ಲಿ ಕನ್ನಡ ಕವಿಗಳು ಬಳಲುತ್ತಿದ್ದರು. ಸಂಸ್ಕೃತ ಭೂಯಿಷ್ಠ ಶೈಲಿಯಿಂದ ಜನತೆಯೊಡನೆ ಸುಲಭ ಸಂವಹನ ಸಾಧ್ಯವಾಗಿರಲಿಲ್ಲ. ಹರಿಹರ ಈ ಆಪಾದನೆಗಳಿಂದ ಹೊರತಾಗಬಯಸಿದ. ರಾಜರನ್ನು ಹೊಗಳುವ ಪದ್ಧತಿಯನ್ನು ಅನುಸರಿಸದೆ ಜನಸಾಮಾನ್ಯರನ್ನು ಕುರಿತು ಹಾಡಿ ಹೊಗಳುವ ಕಾವ್ಯರಚನೆಗೆ

ಕೈ ಹಾಕಿದ. ತಮ್ಮ ವ್ಯಕ್ತಿತ್ವವನ್ನು ಮಾರಿಕೊಳ್ಳುವವರನ್ನು ವಿರೋಧಿಸಿದ, ಬೇರೆ ಬೇರೆ ವೃತ್ತಿಯ, ಜಾತಿಯ, ನಿರ್ಲಕ್ಷಿತ ಸಾಮಾನ್ಯರನ್ನು ಅವರ ಒಳ್ಳೆಯ ಗುಣಗಳ ಸಮೇತ ಪ್ರಶಂಸಿಸುವ ಕಾವ್ಯಗಳನ್ನು ರಚಿಸಿದ. ಕನ್ನಡ ಸಾಹಿತ್ಯ ಚರಿತ್ರೆ ದೃಷ್ಟಿಯಿಂದ ಇದು ಮಹತ್ವದ ಸಂಗತಿ.

ಹರಿಹರ ಕಾವ್ಯ ವಸ್ತುವನ್ನು ಆರಿಸಿಕೊಂಡದ್ದರಲ್ಲಿ ವಿಶಿಷ್ಟತೆ ತೋರಿಸಿದನು. ಪುರಾಣೇತಿಹಾಸಗಳಿಂದ 'ಗಿರಿಜಾಕಲ್ಯಾಣ'ದ ಹೊರತು ಬೇರೆ ಯಾವ ವಸ್ತುವನ್ನೂ ಆರಿಸಿಕೊಳ್ಳಲಿಲ್ಲ. ದೇವ ದೇತೆಗಳಲ್ಲದೆ ಜನಸಾಮಾನ್ಯರೇ ಆಗಿದ್ದರು. ತಮ್ಮ ಶೀಲ ಸದ್ಗುಣಗಳಿಂದ ದೇವಮಟ್ಟಕ್ಕೆ ಏರಿದ ಭಕ್ತಶ್ರೇಷ್ಠರ ಜೀವನಗಳನ್ನು ರಗಳೆಗಳ ವಸ್ತುವಾಗಿ ಆರಿಸಿಕೊಂಡರೂ ಶರಣರ ನಿರ್ಮಲ ಜೀವನ, ನಿಷ್ಕಪಟ ಪ್ರೇಮ, ಶ್ರದ್ಧಾನ್ವಿತ ಬಾಳು, ಸಾಕಾರ ನಿಷ್ಠೆ, ಸರ್ವಭೂತಂಗಳು ಅನುಕಂಪ, ಆತನ ಮನಸ್ಸನ್ನು ಸೂರೆಗೊಂಡಿದ್ದವು. ಸಾಮಾನ್ಯ ಮನುಷ್ಯರಂತೆ ಹುಟ್ಟಿದ ಶಿವಶರಣರು ದೇವರ ಹಾಗೆ ಲೋಕದಲ್ಲಿ ನಡೆದುಕೊಂಡರು. ಎಲ್ಲರ ಜೀವನದಲ್ಲಿ ಸಾಮಾನ್ಯವಾಗಿ ಕಂಡುಬಂದ ಕಷ್ಟಕಾರ್ಪಣ್ಯಗಳು, ಸುಖ ದುಃಖಗಳು ಅವರ ಜೀವನದಲ್ಲಿಯೂ ಎದ್ದು ತೋರಿದವು. ಆದರೂ ಶರಣರು ತಮ್ಮ ನಿಗ್ರಹದಿಂದಲೂ ದೈವೀಶಕ್ತಿಯಿಂದಲೂ ಅವನ್ನೆಲ್ಲಾ ಮೀರಿ ನಿಂತರು. ಬಾಳಿನ ಆಕ್ರೋಶವನ್ನು ಅದುಮಿ ಇಹಪರದ ಹಂಗನ್ನು ಹರಿದೊಗೆದು ನಿಂತ ಅವರ ಜೀವನ ದೃಷ್ಟಿ ಹರಿಹರನಿಗೆ ತುಂಬ ಹಿಡಿಸಿದಂತೆ ತೋರುತ್ತದೆ. ಈ ರೀತಿ ಸಾಮಾನ್ಯರಲ್ಲಿ ಅಸಾಮಾನ್ಯನಾಯಕರನ್ನ ಶೋಧಿಸುವ ಹೊಸ ಮಾರ್ಗವನ್ನು ಹರಿಹರ ಹಾಕಿ ಕೊಟ್ಟನು. ಹರಿಹರ ಒಂದು ಚೌಕಟ್ಟಿನಲ್ಲಿ ಕಾವ್ಯ ರಚಿಸಿದವನು. ತನ್ನ ಕಾವ್ಯಕ್ಕೆ ವಸ್ತು ಯಾವುದೇ ಆಗಲಿ ಭಕ್ತಿಯನ್ನು ಸೃಷ್ಟಿಸುತ್ತಾನೆ. ಆತನ ಎಲ್ಲಾ ರಗಳೆಗಳು ಭಕ್ತಿಯ ಮಹತ್ವವನ್ನು ಸಾರುವಂತಹವೇ ಆಗಿವೆ.

ಇವುಗಳಿಗೆ ಒಂದು ಸಿದ್ಧಮಾದರಿಯಿದೆ. ಅವುಗಳಲ್ಲಿ ಎರಡು : ೧) ಕೈಲಾಸದಲ್ಲಿ ಹುಟ್ಟಿದ ಶರಣರು ಅಲ್ಲಿ ಯೋವುದೋ ತಪ್ಪನ್ನು ಮಾಡಿ ಶಾಪಗ್ರಸ್ತರಾಗಿ ಭೂಲೋಕದಲ್ಲಿ ಹುಟ್ಟುತ್ತಾರೆ. ಮತ್ತೆ ಅಲ್ಲಿ ತನ್ನ ಸಾಧನೆ ಮತ್ತು ನಿಷ್ಠೆಯಿಂದ ಶಿವನ ಮೆಚ್ಚುಗೆಗಳಿಸಿ ಕೈಲಾಸ ಸೇರುತ್ತಾರೆ. ಬಸವರಾಜ ದೇವರ ರಗಳೆ, ಮಹಾದೇವಿಯಕ್ಕನ ರಗಳೆ, ಪ್ರಭುದೇವರರಗಳೆ ನಂಬಿಯಣ್ಣನರಗಳೆ, ರೇವಣಸಿದ್ಧೇಶ್ವರರಗಳೆ ಮುಂತಾದ ಕಾವ್ಯಗಳಲ್ಲಿನ ನಾಯಕರ ಜನನವಾಗುವುದು ಕೈಲಾಸದಲ್ಲಿಯೇ. ಅಲ್ಲಿ ಅವರು ಮಾಡಿದ ತಪ್ಪಿಗೆ ಬೇರೆ ಬೇರೆ ಹೆಸರುಗಳನ್ನು ಪಡೆದು ಭೂಲೋಕದಲ್ಲಿ ಹುಟ್ಟುತ್ತಾರೆ. "ಬಸವಣ್ಣ ಶಿವನೀಡಿದ ಪ್ರಸಾದವನ್ನು ನಂದೀಶನಿಗೆ ಕೊಡುವುದನ್ನು ಮರೆತು; ಕೊಟ್ಟೆನೆಂದು ಸುಳ್ಳು ಹೇಳುವ ತಪ್ಪು ಮಾಡಿದರೆ, ಪ್ರಭುದೇವ ಹರನೋಲಗದಲ್ಲಿ ಸುರಸತಿಯೊಬ್ಬಳನ್ನು ಆಸೆಯಿಂದ ನೋಡುವ ತಪ್ಪು ಮಾಡುತ್ತಾನೆ. ಮಹಾದೇವಿಯಕ್ಕ ಗುಪ್ತಗಣನಾಥನೊಬ್ಬನನ್ನು ಭವಿಯೆಂದು ನುಡಿಯುವ ತಪ್ಪು ಮಾಡುತ್ತಾಳೆ. ಹೀಗೆ ಮಾಡಿದ ತಪ್ಪುಗಳಿಂದ ಭೂಲೋಕದಲ್ಲಿ ಹುಟ್ಟುವ ಶಾಪ ಹೊಂದುತ್ತಾರೆ. ಕಷ್ಟಗಳನ್ನು ಅನುಭವಿಸುತ್ತಾರೆ. ಶಿವ ಒಡ್ಡಿದ ಪರೀಕ್ಷೆಗಳನ್ನು ಎದುರಿಸಿ ಯಶಸ್ವಿಗಳಾಗುತ್ತಾರೆ. ಇದರಿಂದ ಸಂತೋಷಗೊಂಡ

ಶಿವ ಅವರನ್ನು ತನ್ನೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಬಂದು ಗಣಪದವಿಯನ್ನು ನೀಡಿ ಗೌರವಿಸುತ್ತಾನೆ. ೨) ಭೂಲೋಕದಲ್ಲಿ ಹುಟ್ಟಿ ಶಿವ ಒಡ್ಡಿದ ಹಲವು ಪರೀಕ್ಷೆಗಳನ್ನು ಎದುರಿಸಿ ಗೆದ್ದು ಕೈಲಾಸಕ್ಕೆ ಸೇರುವುದು ಇನ್ನೊಂದು ಮಾದರಿ ಉದಾ:- ಇಳೆಯಾಂಡ ಗುಡಿಮಾರರ ರಗಳೆ, ಮಾದಾರಚನ್ನಯ್ಯನ ರಗಳೆ, ಇಹಃಪ್ಪಗೆಯಾಂಡ, ಕೊಂಡಗುಳಿಕೇಶಿರಾಜ, ಹಾವಿನಾಳಕಲ್ಲಯ್ಯ, ಕೋಳೂರು ಕೊಡಗೂಸು, ಕಾರಿಕಾಲಮ್ಮೆ, ಅತಿಭಕ್ತ ಮುಂತಾದ ರಗಳೆಗಳ ಕಥೆ ಆರಂಭಗೊಳ್ಳುವುದು ಭೂಲೋಕದಲ್ಲಿ. ಇದರ ನಾಯಕರು ಇಲ್ಲಿಯೇ ಹುಟ್ಟಿ ಶಿವಭಕ್ತಿಯಲ್ಲಿ ತಲ್ಲೀನರಾಗುತ್ತಾರೆ. ಶಿವ ಒಡ್ಡಿದ ಪರೀಕ್ಷೆಯಲ್ಲಿ ಜಯಗಳಿಸಿ ಕೈಲಾಸಕ್ಕೆ ಹೋಗಿ ಗಣಪದವಿಯನ್ನು ಪಡೆಯುತ್ತಾರೆ. ಹೀಗೆ ಹರಿಹರ ಒಂದು ಸಿದ್ಧಮಾದರಿಯನ್ನು ಅನುಸರಿಸಿಕೊಂಡು ಬಂದಿದ್ದಾನೆ.

ಸಿದ್ಧಮಾದರಿಯಲ್ಲಿ ಕಾವ್ಯ ಬರೆದ ಹಾಗೆ, ರಗಳೆಗಳನ್ನು ರಚಿಸುವಲ್ಲೂ ತನ್ನದೇ ಆದ ಕ್ರಮವನ್ನು ಅನುಸರಿಸುತ್ತಾನೆ.

"ಕಾವ್ಯದ ಆದಿ ಮತ್ತು ಅಂತ್ಯದಲ್ಲಿ ಸಾಮಾನ್ಯವಾಗಿ ಕಂದಪದ್ಯ ಇಲ್ಲವೆ ವೃತ್ತವನ್ನು ರಚಿಸುತ್ತಾನೆ. [ವೃತ್ತಗಳು ಕಡಿಮೆ ಸಂಖ್ಯೆಯಲ್ಲಿ ಬಳಕೆಯಾಗಿವೆ.] ಈ ಪದ್ಯ ಹಾಗೂ ರಗಳೆಯ ಅಂತ್ಯದಲ್ಲಿ ಸಾಧಾರಣವಾಗಿ 'ಹಂಪೆಯ ವಿರೂಪಕ್ಷ' ಅಂಕಿತವನ್ನು ಬಳಸುತ್ತಾನೆ. ಇಲ್ಲದಿದ್ದರೆ ಪರ್ಯಾಯ ಪದಗಳಾದ 'ಹಂಪೆಯರಸ' 'ಹಂಪೆಯ ದೇವ' ಹಂಪೆಯ ವಿರುಪ' 'ಹಂಪೆಯ ರಾಯ' 'ಶ್ರೀ ವಿರೂಪಾಕ್ಷಲಿಂಗ' ಇವುಗಳಲ್ಲಿ ಒಂದನ್ನು ಬಳಸುತ್ತಾನೆ. ಆದಿಯ ಪದ್ಯದಲ್ಲಿ ಸಂಬಂಧಪಟ್ಟ ಶರಣನ ಶಿವಭಕ್ತಿಯ ವಿಶಿಷ್ಟ ಸ್ವರೂಪ ಇಲ್ಲವೆ ಪರಶಿವನ ಸ್ವರೂಪ ವಿಲಾಸಗಳನ್ನು ಧ್ವನಿಯುಕ್ತವಾದ ಒಂದೆರಡು ಮಾತುಗಳಲ್ಲಿ ಮೂಡಿಸಿ ಅಂತಹ ಭಕ್ತನನ್ನು ಹಂಪೆಯ ವಿರೂಪಾಕ್ಷನು ಮೆರೆದನು ಎಂದು ಹೇಳುತ್ತಾನೆ. ಜೊತೆಗೆ, ಇಂತಹ ಶರಣನ ಕಥೆಯನ್ನು 'ಅವಧರಿಸು ವಿರೂಪಾಕ್ಷ', 'ಕೇಳಯ್ಯ ಹಂಪೆಯ ವಿರೂಪಾಕ್ಷ', 'ಅವಧಾರು ಹಂಪೆಯ ವಿರೂಪಾಕ್ಷ' ಎಂಬ ಭಿನ್ನಪವನ್ನು ಸೇರಿಸುತ್ತಾನೆ. ಅಲ್ಲಿ ಸಂಬಂಧಪಟ್ಟ ಭಕ್ತನ ಹೆಸರನ್ನೂ ಉಲ್ಲೇಖಿಸುತ್ತಾನೆ.

ಅಂತ್ಯದ ಪದ್ಯದಲ್ಲಿ ಕವಿ ಭಕ್ತನ ಹೆಸರು ಹಾಗೂ ಹಿರಿಮೆಗಳನ್ನು ತಿಳಿಸಿ ಅಂತಹ ಮಹಿಮಾನ್ವಿತನ 'ಶಿಶುವೆಂದು', 'ಆಳೆಂದು', 'ಕಿಂಕರನೆಂದು', 'ಸುತನೆಂದು', 'ಭೃತನೆಂದು' ತನ್ನನ್ನು ಕರುಣಿಸು, ಸಲಹು ಎಂದು ಬೇಡಿಕೊಳ್ಳುತ್ತಾನೆ. ಇಲ್ಲದಿದ್ದಲ್ಲಿ ಭಕ್ತನ ಹೆಸರು ಹೇಳಿ ಹಂಪೆಯರಾಯನ ಕರುಣೆಯನ್ನು ಕೋರುತ್ತಾನೆ ಅಥವಾ ಹಂಪೆಯರಸನ ಹೆಸರು ಹೇಳಿ ಭಕ್ತರ ಪೂಜೆ ಯಾಚಿಸುತ್ತಾನೆ. ಕಂದಪದ್ಯದ ನಂತರ ಕವಿ ನೇರವಾಗಿ ಕಥೆ ಪ್ರಾರಂಭಿಸುತ್ತಾನೆ. ಕಥೆ ಯಾರಿಗೆ ಸಂಬಂಧಿಸಿದ್ದರೂ ಆರಂಭದಲ್ಲಿ ನಾಯಕನ ದೇಶದ ವರ್ಣನೆ, ಅಲ್ಲಿ ಹರಿವ ನದಿ, ಭಕ್ತಿಗೆ ತವರಾದ ಊರು, ದೇವಾಲಯ. ಭಕ್ತನ ಪರಿಚಯ, ಗಿಡಮರ, ಪ್ರಾಣಿ ಪಕ್ಷಿಗಳ ಪರಿಚಯ ಮಾಡಿಕೊಡುತ್ತಾನೆ. ಕಥೆ ಕೈಲಾಸದಲ್ಲಿ ಪ್ರಾರಂಭವಾದರೆ ರಜತಗಿರಿ, ಶಿವನ ಸಭೆ, ವೈಭವ, ಶಿವಗಣದ ಸದಸ್ಯ ಅಥವಾ ಭಕ್ತನಿಂದ ಘಟಿಸುವ ಕ್ಷುಲ್ಲಕ ಅಪರಾಧ, ಶಿವನಿಂದ ಪರೀಕ್ಷೆಗೆ ಒಳಪಡುವ, ಪರೀಕ್ಷೆಯಲ್ಲಿ

ಭಕ್ತನು ವಿಜಯಗಳಿಸುವ, ವಿಜಯದ ನಂತರ ಭಕ್ತನು ಕೈಲಾಸಕ್ಕೆ ಕಥಾ ಸಾರಾಂಶವನ್ನು ಹೇಳಿ ಹಂಪೆಯಾಳ್ದನ ಸ್ತುತಿಯೊಂದಿಗೆ ಕಥೆಯನ್ನು ಪೂರ್ಣಗೊಳಿಸುತ್ತಾನೆ[೩].

ಹರಿಹರರ ರಗಳೆಗಳು ಕೇವಲ ಭಕ್ತಿಯನ್ನಷ್ಟೇ ಚಿತ್ರಿಸುವುದಿಲ್ಲ. ಶರಣರ ಬದುಕಿಗೆ ಸಂಬಂಧಿಸಿದ ವಿವರಗಳನ್ನು ಒದಗಿಸುತ್ತವೆ. ಅಂದರೆ ಭಕ್ತರಸ್ಥಳ –ದೇಶ. ತಂದೆ, ತಾಯಿ, ಬಾಲ್ಯ, ವೃತ್ತಿ, ನಿಷ್ಠೆ ಆಸಕ್ತಿ, ಶೌರ್ಯಸಾಹಸಗಳ ವಿವರಗಳನ್ನು ನೀಡುವುದುಂಟು. ಅದಕ್ಕೆ ಸೂಕ್ತ ನಿದರ್ಶನವೆಂದರೆ ಮಹಾದೇವಿಯಕ್ಕನ ರಗಳೆ. ಇದರಲ್ಲಿ ಆಕೆಯ ಭಕ್ತಿಯ ಉನ್ನತಿಯನ್ನು ಚಿತ್ರಿಸುತ್ತಾನೆ. ಜೊತೆಗೆ ಆಕೆಯ ಬದುಕಿನ ಹಲವಾರು ವಿವರಗಳನ್ನು ನೀಡುತ್ತಾನೆ, ಹುಟ್ಟು, ಬಾಲ್ಯ, ತಂದೆ – ತಾಯಿ, ಊರು, ದೇಶ, ಯೌವ್ವನ, ಬೆಳವಣಿಗೆ, ಮಲ್ಲಿಕಾರ್ಜುನನ ಹುಡುಕಾಟ ಒಲ್ಲದ ಪುರುಷನೊಂದಿಗೆ ಮದುವೆಯಾಗಿ ಅನುಭವಿಸುವ ಸಂಕಟ, ಅರಸ ಮಂತ್ರಿ–ಅವರ ಅಮಾನವೀಯ ನಡವಳಿಕೆ, ಮಗಳಿಗಾಗಿ ತಂದೆತಾಯಿ ಅನುಭವಿಸುವ ಸಂಕಟ, ಅಂತಿಮವಾಗಿ ಎಲ್ಲರನ್ನು ಬಿಟ್ಟು ಶ್ರೀಗಿರಿಯ ಕಡೆಗೆ ಮಲ್ಲಿಕಾರ್ಜುನನನ್ನು ಹುಡುಕುತ್ತಾ ಹೊರಟ್ಟಿದ್ದು –ಇತ್ಯಾದಿ ಸಂಗತಿಗಳನ್ನು ಒಳಗೊಂಡಿದೆ. ಉಳಿದ ರಗಳೆಗಳಲ್ಲೂ ಹೀಗೆಯೇ ನಾಯಕ ನಾಯಕಿಯರ ಜೀವನ ವಿವರಗಳು ದಾಖಲಾಗಿರುವುದನ್ನು ಕಾಣಬಹುದು. "ಮಲುಹಣ, ನಂಬಿಯಣ್ಣನಂಥವರು ಮಹೋನ್ನತೀಕರಣವನ್ನು ಸಾಧಿಸಿ ದೈವೀಕೃಪೆಗೆ ಪಾತ್ರರಾಗುತ್ತಾರೆ. ಓಹಿಲಯ್ಯ, ಮಳೆಯರಾಜನಂತಹವರು ಮಾನವ ಜೀವನದಲ್ಲಿ ಸಾವಿನ ಭೀತಿಯನ್ನೇ ಅಳಿಸಿ ಶಿವಕೃಪೆಗೆ ಪಾತ್ರರಾಗುತ್ತಾರೆ. ಉದ್ಭಟದೇವ, ಹಲಾಯುಧ, ಅಮರನೀತಿ ಮುಂತಾದವರು ದೈವೀಶಕ್ತಿಯ ಪ್ರದರ್ಶನ ಸ್ಪರ್ಧೆಯಲ್ಲಿ ಸಜೀವವಾಗಿಯೇ ವಿಮಾನದಲ್ಲಿ ಹೋಗುತ್ತಾರೆ. ಜೊತೆಗೆ ತಮ್ಮ ಕುಟುಂಬ, ದೇಶ ಅಥವಾ ಪುರವನ್ನೋ ಕೈಲಾಸಕ್ಕೆ ತೆಗೆದುಕೊಂಡು ಹೋಗುತ್ತಾರೆ. ಇನ್ನೂ ಕೆಲವರು ವೀರಾವೇಶದಿಂದ ಹೋರಾಡಿ ಶಿವನ ಮೆಚ್ಚುಗೆಗೆ ಪಾತ್ರರಾಗುತ್ತಾರೆ. ಅವರಲ್ಲಿ ಆದಯ್ಯ ಮತ್ತು ಏಕಾಂತರಾಮಯ್ಯನ ಸಾಧನೆಗಳು ಅದ್ಭುತವಾಗಿವೆ. ಕಣ್ಣಪ್ಪ ತನ್ನ ಕಣ್ಣನ್ನೇ ಕಿತ್ತು ಶಿವನಿಗೆ ನೀಡುವುದರ ಮೂಲಕ ತನ್ನ ಉತ್ಕಟ ಭಕ್ತಿಯನ್ನು ಪ್ರಕಟಿಸಿದರೆ, 'ಮೊನೆಯಿಡುವ' ತನ್ನನ್ನೇ ಇರಿದುಕೊಂಡು ತನ್ನ ಭಕ್ತಿಯನ್ನು ಪ್ರಕಟಿಸುತ್ತಾನೆ. ಹಾಗೆಯೇ 'ಅರಿವಾಳ್ತಂಡ' ತನ್ನ ಶಿರವನ್ನೇ ಕತ್ತರಿಸಿಕೊಳ್ಳುತ್ತಾನೆ. 'ಕಣಂಬುಲ್ಲ ನಂಬಿ' ಶಿರಕ್ಕೇ ಬೆಂಕಿ ಹಚ್ಚಿಕೊಳ್ಳುತ್ತಾನೆ. 'ಚಂಡೇಶಪಿಳ್ಳೆ' ತಂದೆಯನ್ನೇ ಕೊಲ್ಲುತ್ತಾನೆ. ಒಲ್ಲಘಾಂಡಮೂರ್ತಿ ತನ್ನ ಮೊಳಕೈಯನ್ನೇ ಗಂಧವೆಂದು ತೇಯುತ್ತಾನೆ. 'ಸಿರಿಯಾಳ' ಮಗನನ್ನೇ ಕತ್ತರಿಸಿ ಶಿವನಿಗೆ ಊಣ ಬಡಿಸುತ್ತಾನೆ. ಹೀಗೆ ಒಬ್ಬೊಬ್ಬ ಭಕ್ತನೂ ಶಿವನ ಸಾನ್ನಿಧ್ಯಕ್ಕಾಗಿ ಒಂದೊಂದು ಸಾಧನೆ ಮಾಡಿ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಆದರೆ ಈ ಎಲ್ಲರ ಭಕ್ತಿಯ ಸಾಧನೆಗಿಂತಲೂ ಬಸವಣ್ಣನ ಭಕ್ತಿ ಸಾಧನೆ ವಿಶಿಷ್ಟವಾದುದು. ಆತ ಭೂಲೋಕದ ಸುಖ ದೇವಲೋಕದಲ್ಲಿ ದೊರೆಯಲು ಸಾಧ್ಯವೇ? ಎಂದು ಪ್ರಶ್ನಿಸಿ, ಮರ್ತ್ಯಕ್ಕೇ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಾನೆ. ಅಲ್ಲಿದ್ದೇ ಎಲ್ಲವನ್ನೂ ಸಾಧಿಸುತ್ತಾನೆ"?[೪]

ಹರಿಹರ ತನ್ನ ರಗಳೆಗಳಲ್ಲಿ ಕೈಲಾಸಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ್ದಾನೆ. ಕೈಲಾಸದಷ್ಟೇ ಪ್ರಾಮುಖ್ಯತೆಯನ್ನು ಭೂಲೋಕಕ್ಕೆ ನೀಡಿದ್ದಾನೆ. ಶಿವಗಣಗಳಲ್ಲಿ ಸದಸ್ಯತ್ವ ಪಡೆಯಬೇಕಾದರೆ ಆತ ಭೂಮಿಗೆ ಬರಲೇಬೇಕು. ಅಲ್ಲಿ ಎದುರಾಗುವ ಸಮಸ್ಯೆಯನ್ನು ಎದುರಿಸಲೇಬೇಕು. ಓಹಿಯಲಯ್ಯ ಎಂಬ ಭಕ್ತನು ತನಗೆ ಶಿವ ವಹಿಸಿದ ಹನ್ನೆರಡು ವರ್ಷಗಳ ಧೂಪದ ಕಾಯಕವನ್ನು ಬೇರೆಯವರಿಂದ ಮಾಡಿಸುತ್ತಾನೆ. ಆಗ ಆತನಿಗೆ ಶಿವ ಕೈಲಾಸಪದವಿಯನ್ನು ನೀಡುವುದಿಲ್ಲ. ಮತ್ತೆ ಹನ್ನೆರಡು ವರ್ಷಗಳ ಕಾಲ ಧೂಪದಕಾಯಕವನ್ನು ನೆರವೇರಿಸುವಂತೆ ಮಾಡುತ್ತಾನೆ. ಒಟ್ಟಾರೆ ಹರಿಹರನ ದೃಷ್ಟಿಯಲ್ಲಿ ಕೈಲಾಸಪದವಿಯನ್ನು ಪಡೆಯಲು ಹೊರಟವನಿಗೆ ಭೂಲೋಕ ಸಾಧನೆಯ ರಂಗವಾಗುತ್ತದೆ. ಯಾರೆ ಆಗಿರಲಿ ಇದರಲ್ಲಿ ಶ್ರಮಿಸಿ ಕೈಲಾಸ ಪ್ರವೇಶ ಪಡೆಯಬೇಕು. ಹರಿಹರನ ಪ್ರಕಾರ ಮರ್ತ್ಯವಿಲ್ಲದೆ ಅಮರ್ತ್ಯವಿಲ್ಲ, ಅಮರ್ತವಿಲ್ಲದೆ ಮರ್ತ್ಯವಿಲ್ಲ, ಹೀಗೆ ಬಸವಣ್ಣ, ಅಕ್ಕ, ಪ್ರಭುದೇವ, ನಂಬಿಯಣ್ಣ ಮುಂತಾದ ಮಹನೀಯರು ಭೂಲೋಕಕ್ಕೆ ಬಂದುಕಷ್ಟ ಸುಖಗಳನ್ನು ಹಂಚಿಕೊಂಡವರೇ ಆಗಿದ್ದಾರೆ.

ಪಂಪ, ಪುರಾಣ ಪುರುಷರನ್ನು ಇತಿಹಾಸದ ವ್ಯಕ್ತಿಗಳನ್ನಾಗಿ ನೋಡಿದರೆ ಹರಿಹರ ಇತಿಹಾಸದ ವ್ಯಕ್ತಿಗಳನ್ನು ಪುರಾಣ ಲೋಕಕ್ಕೆ ಏರಿಸಿದ. ಹರಿಹರನಲ್ಲಿ ಮನುಷ್ಯ ಬದಲಾದದ್ದು ಹೀಗೆ. ವಚನಕಾರರು ತೀರಾ ಸಾಮಾನ್ಯ ಮನುಷ್ಯರೇ ಆಗಿದ್ದರು. ಬಹುಶಃ ಅರವತ್ತೂರು ಜನ ಪುರಾತನರೂ ಹೀಗೆ ಒಂದು ಕಾಲಕ್ಕೆ ಸಾಮಾನ್ಯ ಮನುಷ್ಯರೇ, ಪವಾಡಗಳನ್ನು ಮೆರೆಸುವ ಮೂಲಕ ಹರಿಹರ ಅವರನ್ನು ಮನುಷ್ಯ ಸ್ತರದಿಂದ ಮೇಲೆತ್ತಿದ, ಉದಾತ್ತಗೊಳಿಸಿದ. ಆದರೆ ಉದಾತ್ತಗೊಂಡ ಲೌಕಿಕ ಬದುಕು ಅಲೌಕಿಕದತ್ತ ಮತ್ತೆ ಕಣ್ಣು ನೆಡುವಂತೆ ಮಾಡಿದ. ಇದಕ್ಕೇನು ಕಾರಣ? ಜೈನ ಹಾಗೂ ವೈಷ್ಣವ ಧರ್ಮಗಳೊಂದಿಗೆ ಪೈಪೋಟಿಗೆ ಹೊರಟ ವೀರಶೈವ ಧರ್ಮ ಹೀಗೆ ಮಾಡಬೇಕಾಯಿತು. ಹರಿಹರ ಸಂಪ್ರದಾಯನಿಷ್ಠ ಕವಿಯಂತೆ ಕಂಡ. ಆದರೆ ಹಿಂದಿನ ಕನ್ನಡ ಕಾವ್ಯಗಳಲ್ಲಿ ಕಂಡುಬರುತ್ತಿದ್ದ ರಾಜಪರವಾದ, ಪಂಡಿತ ಪರವಾದ ಮೌಲ್ಯಗಳನ್ನು ನಾಯಕನ ಜೊತೆಯಲ್ಲಿದ್ದ ಆಶ್ರಯದಾತನನ್ನು ಹೊಗಳುವ ಇತ್ಯಾದಿ ಮಾಮೂಲಿಯಾದ ಕಾವ್ಯದ ಪರಿಪಾಠಗಳಿಂದ ಹರಿಹರ ಭಿನ್ನವಾಗಿದ್ದುಕೊಂಡು ಪ್ರತಿಷ್ಠಿತರಿಗೆ ಮೀಸಲಾಗಿದ್ದ ಕನ್ನಡ ಕಾವ್ಯವನ್ನು ತನ್ನ ಕಾವ್ಯ ಸಂದರ್ಭದಲ್ಲಿ ಜನ ಸಾಮಾನ್ಯರಿಗೆ ಮೀಸಲಿಟ್ಟ ಕವಿ. ಅದುವರೆಗೆ ದಿಕ್ಕಾಪಾಲಾಗಿದ್ದ, ಕಡೆಗಣಿಸಲ್ಪಟ್ಟಿದ್ದ ಹಾಗೂ ಕೆಲವರ ಕಾಲ್ತುಳಿತಕ್ಕೆ ಹಲವರನ್ನು ಬಳಸಿಕೊಳ್ಳುತ್ತಿದ್ದ ಕಾಲದಲ್ಲಿ, ಪ್ರತಿಷ್ಠಿತರ ಬಗ್ಗೆ ಕೃತಿ ರಚಿಸುತ್ತಿದ್ದ ಕಾಲದಲ್ಲಿ ಬೇಡರ ಕಣ್ಣಪ್ಪ, ಕುಂಬಾರ ಗುಂಡಯ್ಯ, ಇಳೆಯಾಂಡ ಗುಡಿಮಾರ, ಅತಿಭಕ್ತ ಮೊದಲಾದವರನ್ನು ಕುರಿತು ಬರೆದು ಆಯಾ ಕಾಯಕದ ಮೂಲಕವೇ ಕೈಲಾಸ ಪದವಿಯನ್ನು ಪಡೆದ ವ್ಯಕ್ತಿಗಳ ಅಸಮಾನ್ಯ ಗುಣವನ್ನು ಚಿತ್ರಿಸಿದ ಹರಿಹರ ಕವಿಯ ಪ್ರತಿಭೆ ಅದ್ಭುತವಾದುದು. ಈತನಿಂದಾಗಿ ಕನ್ನಡ ಕಾವ್ಯಲೋಕಕ್ಕೆ ಜನಸಾಮಾನ್ಯರು, ಕೆಳವರ್ಗದವರು ಪ್ರವೇಶಿಸುವಂತಾಯಿತು. ನಾಯಕರೆನಿಸುವಂತಾಯಿತು. ಇಂಥ ಸಾಮಾನ್ಯರನ್ನು ಪರೀಕ್ಷಿಸಲು ಬರುವ ಶಿವ ದುರಹಂಕಾರಿಯಲ್ಲ, ಅತ್ಯಂತ ಶಿಸ್ತಿನವನು, ತೊಂದರೆ ಕೊಟ್ಟು ತನ್ನ ಕಡೆಗೆ ಸೆಳೆದುಕೊಳ್ಳುವ ಸ್ವಭಾವದವನಲ್ಲ.

ಜನ ಅಂತಸ್ತು, ಜಾತಿ, ಕಸುವು ಇವು ಯಾವುವನ್ನೂ ಪರಿಗಣಿಸದೆ ತಾನೇ ಅದರ ಸಮೀಪ ಬಂದು ಗೌರವಿಸುವ ತುಂಬು ಹೃದಯದ ವ್ಯಕ್ತಿ, ಬೇರೆ ಬೇರೆ ಸಂದರ್ಭದಲ್ಲಿ ನಾನಾ ರೀತಿಗಳ ಭಕ್ತರನ್ನು ಪರೀಕ್ಷಿಸಿ ಅದರಲ್ಲಿ ಜಯಶಾಲಿಗಳಾಗುತ್ತಲೇ ಅವರನ್ನು ತನ್ನ ಲೋಕಕ್ಕೆ ಕರೆದುಯ್ಯುವುದರ ಮೂಲಕ ತೀರಾ ಆತ್ಮೀಯವಾಗಿ ಸಂಬಂಧಿಕನಾಗಿ ಗೋಚರವಾಗುತ್ತಾನೆ. ಭಕ್ತ ಪ್ರಾಮಾಣಿಕನಾಗಿದ್ದರೆ ಅಲ್ಲಿಗೆ ಶಿವ ಬಂದೇ ಬರುತ್ತಾನೆ. ಒಮ್ಮೆ ಶಿವ ಕೆಳಜಾತಿಯ ಮಾದಾರ ಚೆನ್ನನ ಮನೆಯಲ್ಲಿ ಚೆನ್ನ ಕೊಟ್ಟ ಅಂಬಲಿಯನ್ನು ಸಂತೋಷದಿಂದಲೇ ಕುಡಿಯುತ್ತಾನೆ. ಆ ಚೋಳ ದೊರೆಯ ಮನೆಯ ಅಮೃತವನ್ನು ಸ್ವೀಕರಿಸುವುದಿಲ್ಲ. ಚೆನ್ನನ ಮನೆಯಲ್ಲಿ ಉಂಡ ಸಂಗತಿಯನ್ನು ಶಿವ ದೊರೆಗೆ ತಿಳಿಸುತ್ತಾನೆ. ಅದಕ್ಕೆ ದೊರೆ ತಕ್ಷಣ ಚೆನ್ನನನ್ನು ಹುಡುಕಿ, ಕಂಡು ಆತನ ಕಾಲಿನ ಧೂಳನ್ನು ತನ್ನ ಕಣ್ಣುಗಳಿಗೆ ಒತ್ತಿಕೊಳ್ಳುತ್ತಾನೆ. ಕಾಲುಗಳನ್ನು ಹಿಡಿದ ದೊರೆ ಬಗ್ಗೆ ಚೆನ್ನ ಗಾಬರಿಯಾಗುತ್ತಾನೆ; 'ಕಾಲು ಬಿಡಿ' ಎಂದು ಬೇಡುತ್ತಾನೆ, ಅದಕ್ಕೆ ಚೋಳ ದೊರೆ

> 'ದೇವ ದೇವ ಸೊಲ್ಲನ ಕುಲಂ ಸತ್ಕುಲಂ
> ಘನ ಮಹಿಮನೊಲ್ಪನ ಜಾತಿಯೆ ನಿರ್ಮಲ ಜಾತಿ
> ಶರ್ವನೊಡನುಂಡ ನಿಮ್ಮಯ ಜಾತಿಗೆ ಆಂ ಸರಿಯೆ?
> ನಿಮ್ಮ ಕೆರವಿಂಗೆನ್ನ ಶಿರ ಸರಿಯೆ?
> ಬಿಡೆನಯ್ಯ ನಿಮ್ಮ ಪದಮಂ ಬಿಟ್ಟು ಬಾಳ್ವೆನೆ?'

ದೊರೆ ಆತನನ್ನು ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುತ್ತಾನೆ. ಮುಜುಗರಕ್ಕೊಳಗಾದ ಚೆನ್ನ ತನ್ನ ಆಂತರಿಕ ಭಕ್ತಿಯನ್ನು ಬಹಿರಂಗಗೊಳಿಸಿದ ಶಿವನ ಬಗ್ಗೆ ಕೋಪ ವ್ಯಕ್ತಪಡಿಸುತ್ತಾನೆ. ತನ್ನನ್ನು ಕತ್ತಿಯಿಂದ ಇರಿದುಕೊಳ್ಳಲು ಪ್ರಯತ್ನಿಸುತ್ತಾನೆ. ಆಗ ಶಿವ ಪ್ರತ್ಯಕ್ಷನಾಗಿ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ಈತನನ್ನು ಸಮಾಧಾನಿಸಿದ್ದಲ್ಲದೆ ಚೋಳನ ಮುಂದೆ ಶಿವ ಆತನನ್ನು ಮನಸಾರೆ ಹೊಗಳುತ್ತಾನೆ. ಇಂಥ ಪಾತ್ರ ಚಿತ್ರಣ ಮಾಡುವಾಗ ಹರಿಹರ ಪೂರ್ಣವಾಗಿ ತಲ್ಲೀನನಾಗಿಬಿಡುತ್ತಾನೆ.

ಇಲ್ಲಿ ಕವಿದೃಷ್ಟಿಯಲ್ಲಿ ಒಡೆಯ ಮತ್ತು ದೇವರು, ಹಿರಿತನವನ್ನು ಅಥವಾ ಶ್ರೇಷ್ಠತನವನ್ನು ಬಹಿರಂಗಗೊಳಿಸುವ ಕೇವಲ ಭ್ರಮೆಗಳಲ್ಲ. ಆಳುವ ದೊರೆ ಕೆಳಜಾತಿಯ ಚೆನ್ನನ ಕಾಲು ಹಿಡಿಯುತ್ತಾನೆ. 'ನಿಮ್ಮ ಕೆರವಿಂಗೆನ್ನ ಶಿರ ಸರಿಯೆ?' ಎನ್ನುತ್ತಾನೆ. ಆನೆಯ ಮೇಲೆ ಮೆರವಣಿಗೆ ಮಾಡುತ್ತಾನೆ. ಶಿವ ಅಂಬಲಿ ಕುಡಿಯುತ್ತಾನೆ. ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ಮನುಷ್ಯ ಮತ್ತು ದೇವರ ನಡುವಿನ ಸಂಬಂಧಗಳು ಮಾನವೀಯ ನೆಲೆಯಲ್ಲಿ ತೀರಾ ಸಹಜವಾಗಿ ರೂಪುಗೊಂಡಿರುವಂತೆ ಕಂಡು ಬರುವುದು ಸ್ವಾಗತಾರ್ಹ ವಿಷಯ. "ಹರಿಹರನ ಕಥಾನಾಯಕರ ಆಯ್ಕೆಯಲ್ಲೇ ಆತನ ಮನುಷ್ಯನ ಕಲ್ಪನೆಯನ್ನು ಗುರುತಿಸಬಹುದು. ಶಿವಭಕ್ತಿಯೇ ಶ್ರೇಷ್ಠವಾಗಿ ಸಾಮಾನ್ಯ ಮನುಷ್ಯನೂ ಕಾವ್ಯ ನಾಯಕನಾದದ್ದು ಹರಿಹರನಲ್ಲಿ. ವಚನ ಚಳುವಳಿ–ಸಾಹಿತ್ಯಗಳ ಹಿನ್ನೆಲೆ ಪಡೆದಿದ್ದ

ಹರಿಹರನ ಸಾಹಿತ್ಯ ತನ್ಮಯಶೀಲ ಭಕ್ತಿ ಮತ್ತು ಶಿವಸ್ತೋತ್ರದಲ್ಲಿ ಮನುಷ್ಯನ ಸಾರ್ಥಕತೆಯನ್ನು ಕಂಡುಕೊಂಡಿದೆ. ಇಲ್ಲಿ ಭಕ್ತಿಗೆ ಮನಸ್ಸು ಮುಖ್ಯವೇ ಹೊರತು ವಿಧಿ-ವಿಧಾನಗಳಲ್ಲ. ಇದು ಬೇಡರ ಕಣ್ಣಪ್ಪನ ರಗಳೆಯಲ್ಲಿ ಸಮರ್ಥವಾಗಿ ಧ್ವನಿತವಾಗಿದೆ" ಶ್ರೀಸಾಮಾನ್ಯರ ಭಕ್ತಿಯಲ್ಲಿ ಒಂದು ವೈಶಿಷ್ಟ್ಯವಿದೆ. ಅವರ ಕಸುಬು ಹಾಗೂ ಭಕ್ತಿಗಳು ಬೇರೆ ಬೇರೆಯಾಗಿರದೆ ಒಂದರೊಡನೊಂದು ಬೆರೆತಿವೆ. ಶ್ರಮದಿಂದ ಜೀವನ ಸಾಗಿಸುವ ಅವರ ಜೀವನೋತ್ಸಾಹ ಮತ್ತು ತಾವು ನಂಬಿದ ತತ್ವಗಳ ಬಗ್ಗೆ ಅವರಿಗಿರುವ ಅಚಲನಿಷ್ಠೆ ಯಾರನ್ನಾದರೂ ಬೆರಗುಗೊಳಿಸುವಂಥದ್ದು.

ಬೇಡರ ಕಣ್ಣಪ್ಪನ ರಗಳೆಯಲ್ಲಿ ಮಡಿ ಮೈಲಿಗೆಗಳ ಸಂಘರ್ಷದ ಚಿತ್ರಣವಿದೆ. ಬೇಟೆಗೆ ಹೋದಾಗ ತಾನು ತಿನ್ನುತ್ತಿದ್ದ ಮಾಂಸಾಹಾರವನ್ನೇ ಕಣ್ಣಪ್ಪ ಶಿವನಿಗೆ ಅರ್ಪಿಸುತ್ತಿದ್ದ. ಶಿವ ಪರೀಕ್ಷಿಸುವ ಹಂತದಲ್ಲಿ ತನ್ನ ಕಣ್ಣುಗಳನ್ನೇ ಕೊಡಲು ತೊಡಗಿದ ಕಣ್ಣಪ್ಪನ ಭಕ್ತಿಯ ಬಗ್ಗೆ ಶಿವನಿಗೇನೋ ನಂಬಿಕೆ ಇತ್ತು. ಅನುಮಾನಿಸುತ್ತಿದ್ದ ಪಾರ್ವತಿಗೆ ಹೀಗೆ ಸ್ಪಷ್ಟಪಡಿಸುತ್ತಾನೆ :

ಪಾರ್ವನಗ್ಗಮವಣಿ ತಿಳಿಮನ ಕದಡು ಎಲೆ ಗೌರಿ
ಪಾರ್ವನರ್ಚನೆ ಇನಿತು ಮನವತಿ ವಿಷಂಗೌರಿ
ಅವನಿಟ್ಟ ಭಸಿತವದನಂ ಮುಟ್ಟಿದೆಲೆಗೌರಿ
ಅವನ ರುದ್ರಾಕ್ಷಿಯದನಂ ಪೂರ್ವದೆಲೆ ಗೌರಿ
ಸತ್ಯವಿಲ್ಲದ ಪೂಜೆ ಸಸಿನವಪ್ಪುದೆ ಗೌರಿ
ನಿತ್ಯವಲ್ಲದ ಹಾಡು ಸೊಗಸಪ್ಪುದೇ ಗೌರಿ
ಮನವಿಲ್ಲದವ ಮುಟ್ಟಿ ಬಡಿವಡೆದ ತೆರನೆನಗೆ
ಮನವುಳ್ಳದಂ ಬಡಿಯ ಪೂಜಿಸಿದ ತೆರನೆನಗೆ

ಬೇರೆ ಬೇರೆ ಜಾತಿಗೆ ಸಂಬಂಧಿಸಿದ – ವೃತ್ತಿಗೆ ಸಂಬಂಧಿಸಿದ ಜನರು ತುಂಬು ಹೃದಯದಿಂದ ಶಿವನಿಗೆ ನಡೆದುಕೊಂಡ ರೀತಿಯೇ ಹರಿಹರನ ಎಲ್ಲ ರಗಳೆಗಳ ವೈಶಿಷ್ಟ್ಯವಾಗಿದೆ. ಭಕ್ತ ಪಾತ್ರಗಳು, ಶಿವನ ವೈವಿಧ್ಯಮಯ ನಡವಳಿಕೆ – ಇಂಥ ಪಾತ್ರ ಸೃಷ್ಟಿ, ಸಂಸ್ಕೃತ ಶಿವ ಪುರಾಣಗಳಲ್ಲಿ ಕಂಡುಬರುವುದಿಲ್ಲ. ತಮಿಳಿನ ಪೆರಿಯ ಪುರಾಣದ ಪ್ರಭಾವಕ್ಕೆ ಹರಿಹರ ಒಳಗಾಗಿದ್ದರೂ ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಪ್ರಥಮ ಬಾರಿಗೆ ಜನ ಸಾಮಾನ್ಯರನ್ನು ನಾಯಕ ಪಾತ್ರಗಳನ್ನಾಗಿ ಮಾಡಿ ಅವುಗಳ ಜೊತೆಗೆ ದೈವ ಪಾತ್ರಗಳನ್ನು ಹೊಸ ರೀತಿಯಲ್ಲಿ ಕಾರ್ಯತತ್ಪರವನ್ನಾಗಿಸಿದ ಕೀರ್ತಿಗೆ ಕಾರಣನಾಗಿದ್ದಾನೆ. ಅಂತೂ ಎಲ್ಲ ರಗಳೆಗಳಲ್ಲೂ ಮನುಷ್ಯನ ವ್ಯಕ್ತಿತ್ವಕ್ಕೆ 'ಘನತೆ'ಯನ್ನು ತಂದುಕೊಟ್ಟಿದ್ದಾನೆ.

ಹರಿಹರನ ರಗಳೆಗಳಲ್ಲಿ ಪವಾಡಗಳಂತೆ ಕಂಡುಬರುವ ಕೆಲವು ಘಟನೆಗಳಿವೆ. ನಿಜ. ಆದರೆ ಅವುಗಳನ್ನು ಪವಾಡಗಳು ಎಂದು ಕರೆಯುವುದಕ್ಕಿಂತ, ಮೂಢನಂಬಿಕೆಗಳು ಎಂದು ನಿರಾಕರಿಸುವುದಕ್ಕಿಂತ ಅವೆಲ್ಲವೂ ಒಂದೊಂದು ಸಾಂಕೇತಿಕಾರ್ಥವನ್ನು

ಪಡೆದುಕೊಂಡಿವೆ ಎಂದು ಪರಿಭಾವಿಸುವುದು ಅತ್ಯಗತ್ಯ. ಇವುಗಳ ಬಗ್ಗೆ ವ್ಯಾಖ್ಯಾನ ಮಾಡುವುದಾಗಲೀ ಪವಾಡದ ಸತ್ಯಾಸತ್ಯತೆಯನ್ನು ನಿರ್ಣಯಿಸುವುದಾಗಲೀ ಮುಖ್ಯವಲ್ಲ. ಪವಾಡದ ಹಿಂದಿರುವ ಆಶಯ ಮುಖ್ಯ. ಒಮ್ಮೆ ಬಸವಣ್ಣ ಶ್ವಪಚನಾದ ಕಂಬಳಿ ನಾಗಿದೇವನ ಮನೆಯನ್ನು ಪ್ರವೇಶಿಸುತ್ತಾನೆ. ಇದನ್ನು ಗಮನಿಸಿದ ವೈಷ್ಣವನೊಬ್ಬ ಬಿಜ್ಜಳನಿಗೆ ದೂರು ಹೇಳುತ್ತಾನೆ. ಆಗ ಬಿಜ್ಜಳ ಹೀಗೆ ಹೇಳುತ್ತಾನೆ "ಎಲೆ ಬಸವಣ್ಣ, ಸುವರ್ಣಂ ಕಮ್ಮಿತ್ತಾದಂತೆ ವಿಪ್ರಕುಲಕೆ ಅನುಕೂಲಮಪ್ಪ ಶಿವಭಕ್ತಿಯಂ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದ ಅತಿಭಕ್ತಿ ತಲೆಗೇರಿ, ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ"[೬] ಆಗ ಬಸವಣ್ಣ "ಹರನನರಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ"[೭] ಎನ್ನುತ್ತಾನೆ.

ಕಂಬಳಿನಾಗಿದೇವನನ್ನು ಬರಮಾಡಿಕೊಂಡು ಅವನ ಉಂಗುಟದ ಮೊನೆಯನ್ನು ಒತ್ತಿದಾಗ ಹಾಲಿನ ಹೊಳೆ ಹರಿಯಿತು. ಒಬ್ಬ ಕೆಳ ಜಾತಿಯವನ ಕಾಲಿನಲ್ಲಿ ಹಾಲು ಬರುವುದು ಮುಖ್ಯವಲ್ಲ. ಅಂಥ ವ್ಯಕ್ತಿಯನ್ನು ರಾಜಸಭೆಗೆ ಕರೆಸಿ ಅವನನ್ನು ಇತರರಿಗೆ ಸರಿಸಮಾನನಂತೆ ಕಾಣಬೇಕೆಂಬ 'ಪ್ರಜರ್ ಕ್ರಿಯೇಟ್' ಮಾಡುವುದರ ಮೂಲಕ ಹರಿಹರ ಸಮಾನತೆಗೆ ಹಾತೊರೆಯುತ್ತಾನೆ. ಒಮ್ಮೆ ಈರುಳ್ಳಿ ವಾಸನೆಯಿಂದ ಬಸವಣ್ಣನಿಗೂ ಕಿನ್ನರಿ ಬೊಮ್ಮಯ್ಯನಿಗೂ ತಿಕ್ಕಾಟ ಜರುಗಿತು. ಬಸವಣ್ಣ ವೈದಿಕ ನೆಲೆಯಿಂದ ಬಂದವನಾದ್ದರಿಂದ ಈರುಳ್ಳಿಯನ್ನು ಮತ್ತು ಅದರ ವಾಸನೆಯನ್ನು ಇಷ್ಟಪಡದೆ ವಿರೋಧಿಸುತ್ತಾನೆ. ಆತನ ವಿರೋಧ ಒಂದು ರೀತಿಯಲ್ಲಿ ಬ್ರಾಹ್ಮಣತ್ವದ ಸಂಕೇತ. ಈರುಳ್ಳಿ ನಿಜವಾದ ಅರ್ಥದಲ್ಲಿ ಸಾಮರ್ಥ್ಯದ ಸಂಕೇತ, ದುಡಿಯುವ ವರ್ಗದ ಸಂಕೇತ, ಬೊಮ್ಮಯ್ಯ ಈರುಳ್ಳಿಯನ್ನು ಇಷ್ಟಪಡುವುದು – ಬಸವಣ್ಣ ಅದನ್ನು ವಿರೋಧಿಸುವುದು – ಈ ಎರಡೂ ಕ್ರಿಯೆಗಳು ಕೆಳವರ್ಗದ ಮೇಲೆ ಮೇಲ್‌ವರ್ಗದವರು ನಡೆಸಿದ ದಬ್ಬಾಳಿಕೆಯನ್ನು ಸೂಚಿಸುತ್ತವೆ. ಕೋಪದಿಂದ ಕಿನ್ನರಿಬಿಮ್ಮಯ್ಯ ಬಸವನನ್ನು ಬಿಟ್ಟು ಹೊರಡುತ್ತಾನೆ. ಕೊನೆಗೆ ಬಸವ ಆತನನ್ನು ಸಮಾಧಾನಿಸಲು ಈರುಳ್ಳಿಯ ಮೆರವಣಿಗೆಯನ್ನು ನಡೆಸುತ್ತಾನೆ. ಮನುಷ್ಯ ನೆಲೆಯಲ್ಲಿ ಸ್ಪೃಶ್ಯ-ಅಸ್ಪೃಶ್ಯ ಎಂಬ ತರತಮಗಳನ್ನೆಣಿಸಿದಂತೆ ಪ್ರಾಕೃತಿಕ ವಸ್ತುವಿನಲ್ಲೂ ಬೇಕು-ಬೇಡಗಳನ್ನು ನಿರ್ಧರಿಸುತ್ತಿದ್ದ ಪದ್ಧತಿಗೆ ನಿಲುಗಡೆ ಬಂದಂತಾಯಿತು. ಇವೆಲ್ಲವೂ ಅಸ್ಪೃಶ್ಯತೆಯ ನಿವಾರಣೆಗೆ ಉದಾಹರಣೆಗಳಾಗಿವೆ. ಈ ಘಟನೆಯಲ್ಲಿ ಹರಿಹರ ಮೇಲ್ವರ್ಗದ ದಬ್ಬಾಳಿಕೆಗೆ ತುತ್ತಾಗಿದ್ದ ಕೆಳವರ್ಗದವರಿವಗೆ ಅಂತಿಮವಾಗಿ ಜಯವನ್ನು ತಂದುಕೊಡುತ್ತಾನೆ. ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳ ತಿಕ್ಕಾಟದಲ್ಲಿ ಸಾಮಾನ್ಯ ಮನುಷ್ಯ ಯಶಸ್ಸನ್ನು ಪಡೆದು ತನ್ನ ವ್ಯಕ್ತಿತ್ವಕ್ಕೆ ಸಂಪೂರ್ಣವಾಗಿ ಘನತೆಯನ್ನು ತಂದುಕೊಳ್ಳುತ್ತಾನೆ. ಇಂಥ ಬೆಳವಣಿಗೆಯಿಂದಾಗಿ ಬದಲಾವಣೆಯಿಂದಾಗಿ ಹರಿಹರ ಪ್ರಮುಖ ಕವಿಯಾಗಿ ಕಾಣಿಸುತ್ತಾನೆ.

ಕಾಲದ ಒತ್ತಡದಿಂದಾಗಿಯೋ ಏನೋ ಪ್ರಾಚೀನ ಕವಿಗಳೆಲ್ಲರೂ ಮೇಲ್ ವರ್ಗದವರನ್ನು ನಾಯಕರನ್ನಾಗಿಸಿಕೊಂಡು ಕಾವ್ಯ ರಚಿಸಿದರು. ಆದರೆ ಹರಿಹರ

ಪ್ರಾಚೀನ ಕವಿಗಳ ಈ ಧೋರಣೆಯನ್ನು ಆರಂಭದಲೇ ಕೈಬಿಟ್ಟು ಕೆಳವರ್ಗದವರನ್ನು ತನ್ನ ಕಾವ್ಯದ ನಾಯಕರನ್ನಾಗಿ ಮಾಡಿಕೊಂಡ. ಇಳೆಯಾಂಡ ಗುಡಿಮಾರ (ಒಕ್ಕಲುಮಗ) ಬೇಡರ ಕಣ್ಣಪ್ಪ (ಬೇಡ), ಅತಿಭಕ್ತ (ಬೆಸ್ತ), ಅನಾಯನಾತ (ಗೋವಳಿಗ), ಮಾದಾರಚನ್ನಯ್ಯ (ಮಾದಾರ) ಕುಂಬರಗುಂಡಯ್ಯ ಮುಂತಾದವರೆಲ್ಲರೂ ಕೆಳವರ್ಗದಿಂದ ಬಂದವರೇ ಆಗಿದ್ದಾರೆ.

ಪ್ರಾಚೀನ ಕವಿಗಳು ಯಾರನ್ನ ಅನರ್ಹರೆಂದು ಭಾವಿಸಿದ್ದರೋ ಅಂಥ ಸಾಮಾನ್ಯರ ಚರಿತ್ರೆಗಳನ್ನು ಹರಿಹರ ನಿರೂಪಿಸತೊಡಗಿದ. ತಿರುಕುರುಪ್ಪತೊಂಡ ಎಂಬ ಕಂಚಿಯ ಅಗಸ ಬಟ್ಟೆ ಒಗೆಯುವ ಕಾಯಕದಲ್ಲಿನ ನಿಷ್ಠೆಯನ್ನು ಆ ನಿಷ್ಠೆಯಿಂದಾಗಿಯೇ ಅವನು ಕೈಲಾಸಕ್ಕೆ ಹೋದ ಸಂಗತಿಯನ್ನು ವರ್ಣಿಸುತ್ತಾನೆ. ಇಳೆಯಾಂಡ ಗುಡಿಮಾರ, ಬೇಡರಕಣ್ಣಪ್ಪ, ಮಾದಾರ ಚನ್ನಯ್ಯ – ಮುಂತಾದವರು ತಮ್ಮ ತಮ್ಮ ವೃತ್ತಿಯಲ್ಲಿ ನಿಷ್ಠೆ ತೋರುತ್ತಾ ಶಿವನೊಡ್ಡುವ ಪರೀಕ್ಷೆಯಲ್ಲಿ ಯಶಸ್ವಿಗಳಾಗುತ್ತ ಕೈಲಾಸ ಪದವಿ ಹೊಂದಿದವರ ಕಥೆಗಳನ್ನ ನಿರೂಪಿಸುತ್ತಾನೆ.

ತಿರುವಾಂಕೂರಿನವನಾದ ಮೆರೆಮಿಂಡದೇವ ಶಿವನಿಗೂ ಬಹಿಷ್ಕಾರ ಹಾಕಿದ ಭೂಪ. ಭಕ್ತರಿದ್ದರೆ ಶಿವ. ಭಕ್ತರೆ ಶಿವನಭಾಗ್ಯ. ಭಕ್ತರಿಲ್ಲದಿದ್ದರೆ ಶಿವನಿಲ್ಲ. ಭಕ್ತನಾದವನು ಮತ್ತೊಬ್ಬನನ್ನು ಗೌರವಿಸಬೇಕು ಎಂಬ ತತ್ವದ ತಿಳಿವಳಿಕೆಯ ಶಿವನಿಗೂ ಆತನ ಒಲವಿನ ಪುತ್ರನಾದ ನಂಬಿಗೂ ತಿಳಿಯಪಡಿಸಿದವನು. ಕಾರಿಕಾಲಮ್ಮೆ ಚೋಳದೇಶದ ಕಾರಿಕಾಲು ಎಂಬ ಉರಿನವಳು. ಈಕೆಯ ಗಂಡ ಮಾಣಿಕಶೆಟ್ಟಿ. ಅಕ್ಕಮಹಾದೇವಿಯ ರೀತಿಯಲ್ಲಿ ಶ್ರಮದಿಂದ ಶಿವನನ್ನು ಒಲಿಸಿಕೊಳ್ಳುತ್ತಾಳೆ. ಕೈಲಾಸಕ್ಕೆ ಹೋಗುವಾಗ ಶರಣರು ನಡೆದ ಮಾರ್ಗವನ್ನು ತುಳಿಯಲು ಅಂಜಿ ತಲೆಯಿಂದ ನಡೆದು ಕೈಲಾಸ ಸೇರುತ್ತಾಳೆ. ಸೋಮಾಸಿಮಾರ ಶಿವಪುರದವನು. ಸಕಲಶಾಸ್ತ್ರ ತಿಳಿದವ. ಹೊಲೆಯನೊಬ್ಬನನ್ನು ಶಿಷ್ಯನನ್ನಾಗಿ ಮಾಡೊಕೊಂಡಿದ್ದರಿಂದಾಗಿ ಬ್ರಹ್ಮಣರು ನಿಂದಿಸುತ್ತಾರೆ. ಶಿಷ್ಯ ಹೊಲೆಯನಿಂದ ವೇದವನ್ನು ಹೇಳಿಸಿ ಅವರನ್ನು ಸೋಲಿಸುತ್ತಾನೆ. ಉತ್ತುಂಗ ಶೈವದೀಕ್ಷೆ ನೀಡುತ್ತಾನೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಶೃಂಗಾರ–ವೀರವನ್ನ ಬಿಟ್ಟರೆ ಉಳಿದ ಯಾವುದೂ ಸಾಹಿತ್ಯ ಕ್ರಿಯೆಗೆ ಯೋಗ್ಯವಲ್ಲ ಎಂದೇ ಭಾವಿಸಲಾಗಿತ್ತು. ಆದರೆ ಹರಿಹರ ಶೃಂಗಾರ ವೀರವನ್ನ ಕಾವ್ಯದಲ್ಲಿ ತಂದರೂ ಭಕ್ತಿಗೂ ಮನ್ನಣೆ ನೀಡಿದ. ಉಳಿದವೆಲ್ಲ ಭಕ್ತಿಯ ಮಹತ್ವವನ್ನು ವ್ಯಕ್ತಪಡಿಸಲು ಪೂರಕ ಸಾಮಗ್ರಿಗಳಾಗುತ್ತವೆ. ಮಲುಹಣನ ರಗಳೆಯಲ್ಲಿ ಅವರ ಕಾಮ, ಪ್ರೇಮ, ವಿರಹವನ್ನು ಮನೋಜ್ಞವಾಗಿ ವರ್ಣಿಸಿದ್ದರೂ ಮಲುಹಣಿಯ ಮೂಲಕ ಭಕ್ತಿಯ ಕಡೆಗೆ ಮನಸ್ಸು ಹರಿಯುವಂತೆ ಮಾಡುತ್ತಾನೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾವ್ಯನಾಯಕರನ್ನು ಆಯ್ಕೆ ಮಾಡಿಕೊಳ್ಳುವಾಗಲೂ ಸ್ತ್ರೀಪುರುಷರೆಂಬ ತಾರತಮ್ಯವನ್ನು ಉಳಿಸಿಕೊಂಡು ಬಂದಿರುವುದನ್ನು ನೋಡುತ್ತೇವೆ.

ಆದರೆ ಹರಿಹರ ಇಂತಹ ತಾರತಮ್ಯದಿಂದ ಹೊರತಾಗಿಲ್ಲವೆಂದೇ ಹೇಳಬಹುದು. ಮಹಾದೇವಿಯಕ್ಕ, ನಿಂಬಿಯಕ್ಕ, ವೈಜಕವ್ವೆ, ಹೆರೂರಹೆಣ್ಣು, ಕಾರಿಕಾಲಮ್ಮೆ, ಪಾಂಡ್ಯ ಮಹಾದೇವಿ, ಅಮ್ಮವ್ವೆ – ಮುಂತಾದವರು ಪ್ರಧಾನ ಪಾತ್ರಧಾರಿಗಳಾಗದ್ದಾರೆ. ಮಲುಹಣಿ, ಪದ್ಮಾವತಿ, ಮುತ್ತೈದೆ, ಯಸ್ಯಜ್ಞಾನದೇವಿ– ಮುಂತಾದವರು ಪ್ರಧಾನ ಪಾತ್ರಗಳ ಮಹತ್ವವನ್ನು ಹೊಂದಿದ್ದಾರೆ. ಹರಿಹರನಿಗೆ ಈ ಎಲ್ಲರೂ ಸಮಾನರಾಗಿ ಕಂಡಿದ್ದಾರೆ. ಲಿಂಗಭೇದವಿಲ್ಲದೆ ಕಾವ್ಯ ನಾಯಕರನ್ನು ಆರಿಸಿದ ಕೀರ್ತಿಗೂ ಆತ ಬಾಜನನಾಗಿದ್ದಾನೆಂದು ಹೇಳಬಹುದು.

ಪುರಾತನರ ಶರಣರ ಚರಿತ್ರೆಗಳನ್ನು ದಾಖಲುಗೊಳಿಸುವುದೆಂದರೆ ಅವರ ಮೌಲ್ಯಗಳನ್ನು ಕಾವ್ಯರೂಪಕ್ಕಿಳಿಸುವುದೆಂದೇ ಅರ್ಥ. ಎಂ.ಎಂ. ಕಲಬುರ್ಗಿ ಅವರು ಹೇಳುವಂತೆ "ಈ ಕೆಲಸವನ್ನು ಸಾಧಿಸುವುದಕ್ಕಾಗಿ ಹರಿಹರ ವಚನ ಮೌಲ್ಯಗಳಾದ ವರ್ಗಭೇದ ವರ್ಣಭೇದ ಲಿಂಗಭೇದ ನಿರಾಕರಣೆಗಳಿಗೆ ತನ್ನ ಕೃತಿಗಳನ್ನು ನೆಲೆಯಾಗಿಸಿದನು. ವೈದಿಕರ ಈ ಭೇದ ಮೌಲ್ಯಗಳನ್ನು ಕೆಡಹುವ ರೀತಿ ಶರಣರ ಅಭೇದ ಮೌಲ್ಯಗಳನ್ನು ಕಟ್ಟುವ ಬಗೆ ರಗಳೆಗಳಲ್ಲಿ ಅನನ್ಯ ರೀತಿಯಲ್ಲಿ ಮೂಡಿದೆ. ಸಾಲದುದಕ್ಕೆ ಬಸವರಾಜ ದೇವರ ರಗಳೆಯಲ್ಲಿ ಬರುವ ಗೋವುಗಳ ಅಪಹರಣವನ್ನು ಯುದ್ಧಕ್ಕೆ ಬದಲು ಕರುಗಳನ್ನು ಬಿಡಿಸುವ ಮೂಲಕ ಪ್ರತಿಕ್ರಿಯಿಸಿದುದು ವೈದಿಕಮೌಲ್ಯದ ನಿರಾಕರಣೆಯೇ ಆಗಿದೆ"[೮] ಆತನ ಪ್ರಕಾರ ಕೊಡುವವನೂ ಸಂಗನೇ ಕೊಳ್ಳುವವನೂ ಸಂಗನ ಬಸವನೇ' ಆಗಿದ್ದಾನೆ.

ವರ್ಣಭೇದವನ್ನು ಬಸವಣ್ಣ ಎಷ್ಟು ತೀವ್ರವಾಗಿ ವಿರೋಧಿಸುತ್ತಾನೋ ಅಷ್ಟೇ ತೀವ್ರವಾಗಿ ವರ್ಗಭೇದವನ್ನು ವಿರೋಧಿಸುತ್ತಾನೆ. 'ಶ್ರೇಷ್ಠತೆಯ ಮಾನದಂಡ ಜಾತಿಯಲ್ಲ ನಡತೆ' ಎಂಬ ತತ್ವ ಬಸವಣ್ಣನದು. ಮಾದಾರ ಚನ್ನಯ್ಯ, ಸಾಮವೇದಿ, ಹಾವಿನಾಳ ಕಲ್ಲಯ್ಯ, ಕೆಂಬಾವಿ ಬೋಗಣ್ಣ, ಬಸವರಾಜ ದೇವರು – ಮುಂತಾದ ರಗಳೆಗಳಲ್ಲಿ ವರ್ಣಭೇದ ನಿರಾಕರಣೆ ಇರುವುದನ್ನು ಗಮನಿಸಬಹುದು. ಚೋಳ ಚಕ್ರವರ್ತಿ ಮಾದಾರ ಚೆನ್ನಯ್ಯನ ಗುಡಿಸಲಿಗೆ ಹೋಗಿ ನಮಸ್ಕರಿಸುತ್ತಾನೆ. 'ಸಾಮವೇದಿಯ ನೆರಳಿನಿಂದ ಮೈಲಿಗೆಯಾಗುವುದೆಂದು ತಾನು ಬೇಯಿಸುತ್ತಿದ್ದ ಮಾಂಸದ ಮೇಲೆ ಶ್ವಪಚಯ್ಯ ಕೆರಹು ಮುಚ್ಚುತ್ತಾನೆ.

"ಮಾದರ ಚನ್ನಯ್ಯನ ರಗಳೆಯಲ್ಲಿ ದಲಿತ V/s ಅರಸ ಎಂಬ ವರ್ಗ ನೆಲೆ ಇದ್ದರೆ ಸಾಮವೇದಿ ರಗಳೆಯಲ್ಲಿ ದಲಿತ V/s ಬ್ರಾಹ್ಮಣ ಎಂಬ ವರ್ಣ ನೆಲೆ ಇದೆ. ಈ ದೃಷ್ಟಿಯಿಂದ ತುಂಬ ಮಹತ್ವದ ರಗಳೆ ಇದು. ಭಾರತ ದೇಶದ ಯಜಮಾನ ಸಂಸ್ಕೃತಿಯಾದ ವೈದಿಕಕ್ಕೆ ತದ್ವಿರುದ್ಧವಾಗಿ ಶಿವಭಕ್ತಿಯನ್ನ ಪ್ರತಿಷ್ಠಾಪಿಸುವುದು ಇಲ್ಲಿಯ ವಿಶೇಷ. ಮೇಲ್ತುದಿಯ ಬ್ರಾಹ್ಮಣ ಶ್ರೇಷ್ಠನನ್ನು ಒಂದು ಪಾತ್ರವಾಗಿ ಮಾಡಿ ಸಾಮಾಜಿಕ ಶ್ರೇಣೀಕರಣದ ಕೆಳತುದಿಯ ಶ್ವಪಚದೇವರನ್ನು ಇನ್ನೊಂದು ಪಾತ್ರ ಮಾಡಿ ಮುಖಾಮುಖಿಯಾಗಿಸಿ ಮಡಿ–ಮೈಲಿಗೆ, ಪವಿತ್ರ–ಅಪವಿತ್ರ, ಶುದ್ಧ –ಅಶುದ್ಧತೆಯ ಚರ್ಚೆಗೆ ಎಳೆಯುವನು ಹರಿಹರ.

ಸಾಂಪ್ರದಾಯಿಕವಾದ ಶುದ್ಧ ಮಡಿ. ಪವಿತ್ರವೆಂದು ಭಾವಿಸಲಾದ ಆಹಾರಾದಿಗಳನ್ನು ತಿರಸ್ಕರಿಸಿ ಹೊಲಸು ಮೈಲಿಗೆಯನ್ನು ಎತ್ತಿಹಿಡಿಯುವನು. ಶಿವಭಕಿಯ ಎದುರು ಅನೀತೆಯೇ ನೀತಿ, ಮೈಲಿಗೆಯೇ ಮಡಿ, ಅಪವಿತ್ರವೇ ಪವಿತ್ರ, ವರ್ಣ–ವರ್ಗ ಧೋರಣೆಯನ್ನು ಬುಡಮೇಲು ಮಾಡುವ ಈ ಕ್ರಾಂತಿಕಾರಕ ಸಿದ್ಧಾಂತವನ್ನು ಹರಿಹರ ಬದ್ಧತೆಯಿಂದ ನಿಷ್ಠೆಯಿಂದ ಅರ್ಥಪೂರ್ಣವಾಗಿ ಪ್ರತಿಪಾದಿಸುತ್ತಾನೆ. ಶ್ರೇಷ್ಠತ್ವದ ದುರಂಹಕಾರವನ್ನು ಪ್ರತಿಷ್ಠಿತ ಸಾಂಸ್ಕೃತಿಕ ಪರಂಪರೆಯನ್ನು ಶಿವಭಕ್ತ ದಲಿತನ ಮೂಲಕ ಚೂರು ಚೂರು ಮಡುತ್ತಾನೆ"[೯] ಹಾವಿನಾಳ ಕಲ್ಲಯ್ಯನ ರಗಳೆಯಲ್ಲಿ ಬ್ರಾಹ್ಮಣ ಮುಟ್ಟಿ ಮೈಲಿಗೆಯಾಯಿತೆಂದು ನೀರು ತುಂಬಿದ ಮಣ್ಣಿನ ಕೊಡವನ್ನು ಒಡೆದು ಹಾಕಿದ' ಪ್ರಸಂಗವಿದೆ. ಹೊಲೆಯ ವೇಷದಿಂದ ಬಂದ ಶಿವನನ್ನು ಕೆಂಬಾವಿ ಬೋಗಣ್ಣ ಉಪಚರಿಸಿದುದರಿಂದ ವಿಪ್ರರು ದೊರೆಗೆ ದೂರು ನೀಡುತ್ತಾರೆ. ಊರಿಂದ ಆಚೆಗಟ್ಟುತ್ತಾರೆ. ರಾಜಾಜ್ಞೆಯಿಂತೆ ಊರುಬಿಟ್ಟು ಹೊರಡಲು ಅಲ್ಲಿದ್ದ ಶಿವಲಿಂಗಗಳೆಲ್ಲ ಅವನ ಹಿಂದೆಯೇ ಹೊರಟವು. ಪುರಜನರೂ ರಾಜರೂ ಅವನ ಮಹಿಮೆಯನ್ನು ಅರಿತರು, ಕ್ಷಮೆ ಕೇಳಿದರು. ಮತ್ತೆ ಊರಿಗೆ ಕರೆತಂದರು. ಲಿಂಗಗಳು ಮತ್ತೆ ಅವನ ಹಿಂದೆ ಬಂದವು.

ಬಸವರಾಜದೇವರ ರಗಳೆಯಲ್ಲಿ ಬರುವ 'ಜಂಗಮದವೇಳೆ' ಎಂಬ ಪದ, ಬಸವಣ್ಣನನ್ನು ಕುರಿತಂತೆ ಬಳಕೆಗೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಳಕೆಗೊಂಡಿದ್ದ 'ವೇಳೆವಾಳಿ' ಪದವನ್ನ ನೆನಪಿಗೆ ತುರುತ್ತದೆ. ಆಗ ರೂಢಿಯಲ್ಲಿದ್ದ ಮೌಲ್ಯ ಅದು. ಇದರ ಪ್ರಕಾರ ಪ್ರಜೆಗಳು ರಾಜನ ವೇಳಾವಾಳಿಯಾಗಿದ್ದರು. ರಾಜನಿಗಾಗಿ ಪ್ರಾಣತ್ಯಾಗ ಮಾಡಲು ಸಿದ್ಧರಿದ್ದರು. ಆ ರೀತಿ ನೋಡಿದಾಗ ಬಸವಣ್ಣ ರಾಜನಿಗೆ ವೇಳೆವಾಳಿಯಾಗಿರಬೇಕಿತ್ತು. ಆದರೆ ಆತ ವೇಳೆವಾಳಿಯಾದದ್ದು ಪ್ರಭುಗಳಿಗೆ ಜಂಗಮರಿಗೆ. ಪ್ರಾಚೀನ ಮೌಲ್ಯಕ್ಕೆ ಬದಲಾದ ಹೊಸ ಮೌಲ್ಯವನ್ನು ಹರಿಹರ ಇಲ್ಲಿ ಪ್ರತಿಪಾದಿಸಿದ್ದಾನೆ.

"ಮಹಾದೇವಿಯಕ್ಕನ ರಗಳೆ ಹರಿಹರನ ಕಾವ್ಯಾಂಬುಧಿಯಿಂದ ಉದ್ಭವಿಸಿದ ಹಲವು ರಸಾತ್ಮಕ ಕೃತಿಗಳಲ್ಲಿ ಒಂದು. ಬಸವರಾಜದೇವರ ರಗಳೆ ಮತ್ತು ನಂಬಿಯಣ್ಣನ ರಗಳೆಯನ್ನು ಬಿಟ್ಟರೆ ಇದು ಮೂರನೆಯ ಬಹುಮುಖ್ಯ ಕೃತಿ. ಮಹಾದೇವಿಯಕ್ಕನ ಮಹೋನ್ನತ ಬದುಕನ್ನು ಕವಿ ಅಳವಡಿಸಿದ್ದಾನೆ. ಕೈಲಾಸದಲ್ಲಿ ರುದ್ರಕನ್ನಿಕೆಯಾಗಿದ್ದ ಮಹಾದೇವಿ, ಗುಪ್ತಭಕ್ತನೆಂದರಿಯದೆ ಒಬ್ಬ ಗಣೇಶ್ವರನನ್ನು ಭವಿಯೆಂದು ನಿಂದಿಸಿದ ತಪ್ಪಿನ ಪರಿಮಾರ್ಜನೆಗಾಗಿ ಭೂಲೋಕದಲ್ಲಿ ಶಿವಭಕ್ತ ದಂಪತಿಗಳ ಉದರದಲ್ಲಿ ಜನಿಸಿ, ಭವಿಯ ಹೆಂಡತಿಯಾಗಿ ಬಾಳಿ, ತನ್ನ ಶಿವಭಕ್ತಿಯ ಮುಖಾಂತರ ಪುನಃ ಕೈಲಾಸಕ್ಕೆ ಬರಬೇಕೆಂದು ಪಾರ್ವತಿಯಿಂದ ಶಾಪಹೊಂದಿ ಉಡುತಡಿಯಲ್ಲಿ ಅವತರಿಸುತ್ತಾಳೆ. ತಾರುಣ್ಯಕ್ಕೆ ಬಂದಾಗ ಕರಾರಿನ ಮೇಲೆ ಕೌಶಿಕನ ಸತಿಯಾಗಿ ಕೆಲವು ಕಾಲ ದಾಂಪತ್ಯ ಜೀವನ ನಡೆಸುತ್ತಾಳೆ. ಆಮೇಲೆ, ಕೌಶಿಕನು ಭಕ್ತರ ವಿಷಯದಲ್ಲಿ ತೋರಿದ ಅನಾದರ, ಆಕೆಯ ಶಿವಾರ್ಚನೆ ಹಾಗೂ ಗುರುಭಕ್ತಿಗೆ ಉಂಟುಮಾಡಿದ ಅಡ್ಡಿ – ಈ ಮೂರು ತಪ್ಪುಗಳಿಂದಾಗಿ ಅವನನ್ನು ತ್ಯಜಿಸಿ ವೈರಾಗ್ಯತಾಳಿ ಕೇಶಾಂಬರೆಯಾಗಿ ಶ್ರೀಗಿರಿಗೆ ನಡೆಯುತ್ತಾಳೆ"[೧೦] ಆಕೆಯ ತಂದೆ ತಾಯಿ, ಗಂಡ ಮನವೊಲಿಸಲು ಪ್ರಯತ್ನಿಸಿ ವಿಫಲವಾಗುತ್ತಾರೆ. ಭವಿಯ ಸಂಗದಿಂದ ಮಲಿನವಾದ ಶರೀರದ ಮುಕ್ತಿ ಪಡೆದು

ಮತ್ತೆ ಶಿವಲೋಕಕ್ಕೆ ನಡೆಯುತ್ತಾಳೆ. ರಗಳೆಯ ಸಂಕ್ಷಿಪ್ತ ರೂಪವಿದು. ಶಕ್ತಿಕೇಂದ್ರವಾಗಿದ್ದಂತಹ ಕೌಶಿಕನನ್ನು ವಿರೋಧಿಸುವುದು, ಸ್ತ್ರೀಸಂವೇದನೆಯ ನೆಲೆಯಾಗಿ ಆಕೆ ಮಾತನಾಡುವುದು ಅಂದಿನ ಕಾಲಕ್ಕೆ ಮಹತ್ವದ ಸಂಗತಿಯೇ, ಕೌಟುಂಬಿಕ ವಿಘಟನೆಗೊಂದು ಮಹತ್ವದ ಉದಾಹರಣೆ ಇದು.

ಹರಿಹರ ಭಾಷಾ ಪ್ರಯೋಗದಲ್ಲೂ ವಿಶಿಷ್ಟತೆಯನ್ನು ಮೆರೆದಿದ್ದಾನೆ. ಆತನ ಕಾಲಕ್ಕಾಗಲೇ ನಡುಗನ್ನಡ ಸ್ಪಷ್ಟರೂಪ ಪಡೆದಿತ್ತು. ಹೇರಳವಾದ ವಚನ ಸಂಪತ್ತು ಸೃಷ್ಟಿಯಾಗಿತ್ತು. ಧರ್ಮ ಪ್ರಸಾರಕ್ಕೆ ಆಸ್ಥಾನದ ಭಾಷೆಗಿಂತ ಜನರ ಆಡುನುಡಿ ಮಾಧ್ಯಮವಾಗುವುದು ಉಚಿತವೆಂದು ತೋರಿತು. ಸಾಹಿತ್ಯವೂ ಸಹ ರಾಜಾಶ್ರಯಕ್ಕಿಂತ ಜನಾಶ್ರಯವನ್ನು ಬಯಸಿತ್ತು. ಇಂಥ ಸನ್ನಿವೇಶದಲ್ಲಿ ಹರಿಹರ ರಗಳೆಗಳನ್ನು ಸರಳ ಭಾಷೆಯಲ್ಲಿ ರಚಿಸಿದ್ದು ತೀರಾ ಸಹಜ, ಭಾವಕ್ಕೆ ತಕ್ಕ ಭಾಷೆ ಬಳಸಲು ತಡಕಾಡಬೇಕಾಗಿರಲಿಲ್ಲ. ಉದಾ :

ಬಸವಣ್ಣನಿಗೆ ಸಂಗಮೇಶ್ವರನು ಆಶ್ವಾಸನೆ ಕೊಡುವುದು :

'ಎಲೆಮಗನೆ ಎಲೆಕಂದ ಎಲೆಬಸವ ನಿನ್ನನಗಲಿ ನಾನಿರಲಾಜ಼್ ನಿನಗಿನಿತು ನಿರೋಧವೇಕೆ? ಬೇಡಯ್ಯ ಬೇಡೆನ್ನರಸ ಬೇಡೆನ್ನ ಭಕ್ತನಿಧಿಯೆ ನಿನ್ನೊಡನೊಡನೆ ಬಿಡದೆ ಬಪ್ಪೆ....' ಇತ್ತಲೆಗ, ಜೋಗು, ಅಂಬಳಿಕು, ಮಗನೆ, ಕುಣಿದಾಡು ಕುಪ್ಪಳಿಸು ಹೆಡೆಯಾಡು, ಅಲ್ಲಾಡು ತಳ್ಳಾಡು, ಬೊಬ್ಬಿಡು, ಉಮ್ಮಳಿಸು, ಒಡೆಯ ಎಂಬಿತ್ಯಾದಿ ಪದಗಳನ್ನು ಬಳಸುತ್ತಾನೆ. ಎಲ್ಲರನ್ನು ಆಕರ್ಷಿಸುವ ಶೈಲಿ ಅವನದು; 'ಎಲೆಲೆ ಕೌಶಿಕಹೋಗು ನೀನೇಕೆ ನಾನೇಕೆ, 'ಚಳಿಮಗನೆ ಚಳಿಮಗನೆ' 'ಕಡುಬೇಗದಿಂ ಬಂದಪೆಂ' 'ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ' 'ಇದು ಪತ್ರವಲ್ಲಲ್ಲ ಮೂಲ ಪತ್ರಂ ಬೇರೆ' 'ಏಳ್ಮಗನೆ ಹರನುಣಲೊಲ್ಲ' ಇತ್ಯಾದಿ ಸಂವಹನಕ್ಕೆ ಸುಲಭವಾದಂಥವು. ಭಾಷಾಪ್ರಯೋಗದಲ್ಲಿ ತೊಂದರೆ ಕೊಡುತ್ತಿದ್ದ 'ರಳಕುಳಕ್ಷಳ'ಗಳ ವಿಚಾರದಲ್ಲಿ ಸಮಕಾಲೀನ ಕೇಶಿರಾಜನ ಧೋರಣೆಯನ್ನ ಹರಿಹರ ನಿರಾಕರಿಸಿದ. 'ಈ ಅಕ್ಷರಗಳ ಭೇದವನ್ನು ನನ್ನ ಕೃತಿಯಲ್ಲಿ ವಿಚಾರಿಸಬೇಡಿ' ಎಂದು ಹೇಳಿದ. ಹೀಗೆ ಕಾವ್ಯದಲ್ಲಿ ಹರಿಹರ ಮಾರ್ಗ ಭಾಷೆಯನ್ನು ನಿರಾಕರಿಸುತ್ತಲೇ ಇನ್ನೊಂದೆಡೆ ಭಾಷಿಕ 'ವಾಸ್ತವಸತ್ಯ'ವನ್ನು ಎತ್ತಿಹಿಡಿಯುತ್ತಾನೆ. ಬಳಕೆಯಿಂದ ಮರೆಯಾಗುತ್ತಿದ್ದ ಹೇಳೆವಾಳಿ,ಲೆಂಕ, ಎಲೆಮಿಡುಕ, ಸಂಬಳಿಗೋಲು, ಕಟ್ಟುಂಗೂಳು, ಬೂವ ಮುಂತಾದ ಹಲವಾರು ಕನ್ನಡ ಪದಗಳನ್ನು ಮತ್ತೆ ಕಾವ್ಯದಲ್ಲಿ ಬಳಿಸಿದ. ಕಲಬುರ್ಗಿ ಅವರು ಹೇಳುವಂತೆ 'ಇದರಿಂದ ಕನ್ನಡ ಪ್ರಧಾನ ಸಂಸ್ಕೃತಪೂರಕ'ವೆಂಬ ಹೊಸಭಾಷಿಕ ಹದ ಕನ್ನಡದಲ್ಲಿ ಸಿದ್ಧವಾಯಿತು. ಹೀಗೆ ವಸ್ತು, ತಂತ್ರ, ಶೈಲಿ, ಧೋರಣೆ, ನಾಯಕ ಪರಿಕಲ್ಪನೆ ಇತ್ಯಾದಿಗಳಲ್ಲಿ ವಿಶಿಷ್ಟತೆ ತೋರಿದ ಹರಹರ. ಈ ದೃಷ್ಟಿಯಿಂದಲೂ ಆತನ ರಗಳೆಗಳು ಮಹತ್ವ ಪಡೆದಿವೆ.*

---

* ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಹಾಗೂ ಎಂ.ಇ.ಎಸ್. ಕಾಲೇಜಿನ ಕನ್ನಡ ಸ್ನಾತಕೋತ್ತರ ಕೇಂದ್ರದ ಸಹಯೋಗದಲ್ಲಿ ದಿನಾಂಕ : ೨-೫-೨೦೧೧ರಂದು ನಡೆದ 'ಕನ್ನಡ ಸಾಹಿತ್ಯ ಪರಂಪರೆ ಮತ್ತು ಅಂದಿನ ಸಂದರ್ಭ' ಎಂಬ ವಿಚಾರ ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧ; ವಿವೇಚನೆ ೩.

**ಅಡಿ ಟಿಪ್ಪಣಿಗಳು :**

೧. ಪ್ರೊ.ಕೆ.ಜಿ. ನಾಗರಾಜಪ್ಪ (ಸಂ) : ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು, ಪುಟ ೧೪೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೨. ಡಾ. ಬಸವರಾಜ ಕಲ್ಗುಡಿ : ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕಪ್ರಜ್ಞೆ, ಪುಟ ೧೮೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳುರು, ೧೯೮೮

೩. ಡಾ. ಕೆ.ಪಿ. ಮಹದೇವಯ್ಯ : ಹರಿಹರನ ರಗಳೆಗಳ ಸಾಹಿತ್ಯಕ ಅಧ್ಯಯನ, ಪುಟ ೬-೭

೪. ಅದೇ. ಪುಟ ೧೦-೧೧

೫. ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ ಮತ್ತು ಸೃಜನಶೀಲತೆ, ಪು ೪೩, ೧೯೯೧

೬ ಬಸವರಾಜದೇವರ ರಗಳೆ, ಸ್ಥಲ ೧೦, ಪು೩೬, ಸಾಲು : ೩೯-೪೪

೭. ಬಸವರಾಜದೇವರ ರಗಳೆ, ಸ್ಥಲ ೧೦ ಪು ೩೬, ಸಾಲು : ೪೯

೮. ಹರಿಹರನ ರಗಳೆಗಳು, ಪುಟ. ೧೦

೯. ಪ್ರೊ.ಎಸ್.ಎಸ್. ಹಿರೇಮಠ, ಹರಿಹರ ಚಿತ್ರಿಸಿದ ದಲಿತ ಶರಣರು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೮.

೧೦. ಹರಿಹರನ ರಗಳೆಗಳು ಸಾಹಿತ್ಯಕ ಅಧ್ಯಯನ ಪು.೧೩೩-೧೩೪

■

**ಕರ್ನಾಟಕ ಲೋಚನ**
ಸಂಪುಟ ೨೮, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೪

# ೫. ಚಿಕ್ಕದೇವರಾಜವಡೆಯರ ಕಾಲ – ಹೊಸ ಆಸ್ಥಾನ ಕಾವ್ಯ

**–ಡಾ. ಎನ್.ಆರ್. ಲಲಿತಾಂಬ***

## ಮುನ್ನುಡಿ

ಚಿಕ್ಕದೇವರಾಜವಡೆಯರ ಕಾಲದ ಸಾಹಿತ್ಯವನ್ನು 'ಪುರಾಣ ಪುಣ್ಯ ಕಥೆಗಳ ಸಮೂಹ ಎಂದು ಅಲಕ್ಷ್ಯಮಾಡಲಾಗಿತ್ತು. ಚರಿತ್ರಕಾರರು ಈ ಪುರಾಣ ಪುಣ್ಯಕಥೆಯೊಳಗೆ ಹುದುಗಿದ್ದ ಚರಿತ್ರೆಯನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮಾಡಿದ್ದಾರಾದರೂ ಅದು ಕೇವಲ ಒಡೆಯರ ವಂಶಾವಳಿ, ಆಡಳಿತ ಕಾಲಮಾನದ ಪುನಾರಚನೆಯಷ್ಟೇ, ಚರಿತ್ರೆ ಎಂದರೆ ಕೇವಲ ಘಟನೆಗಳ ದಾಖಲೆ ಅಷ್ಟೇ ಅಲ್ಲ. ಇಡೀ ಒಂದು ಭೌಗೋಳಿಕ ಪರಿಸರದ, ಆ ಕಾಲಮಾನದ ನಾಡಿಮಿಡಿತ, ಭಾವಕೋಶ, ಸಾಂಸ್ಕೃತಿಕ ಕಥನ, ಅಂತಹ ಚಾರಿತ್ರಿಕ ಸಾಂಸ್ಕೃತಿಕ ಒತ್ತಡ ವಿನ್ಯಾಸಕ್ಕೆ ಓಗೊಟ್ಟಿರುವ ಚಿಕ್ಕದೇವರಾಜ ಒಡೆಯರ ಆಸ್ಥಾನ ಪೋಷಿತ, ಸಾಹಿತ್ಯ ಮತ್ತು ಅದರ ಪ್ರಭಾವ ಪರಿಸರದಲ್ಲಿ ರಚಿತವಾದ ಕಲೆ ಮತ್ತು ಸಾಹಿತ್ಯ ಸೃಷ್ಟಿಯನ್ನು ಅರಿಯುವ, ಆಮೂಲಕ ಆ ಕಾಲದ ಸಾಂಸ್ಕೃತಿಕ ಕಥನವನ್ನು ಕಟ್ಟಿಕೊಳ್ಳುವ ಪ್ರಯತ್ನವಿನ್ನೂ ಆಗಬೇಕಾಗಿದೆ.

ಒಂದು ಕಾಲದ ಸಾಹಿತ್ಯ ಮಾರ್ಗದಕಡೆಗೆ ಅಥವಾ ದೇಸಿಯ ಕಡೆಗೆ, ಪ್ರೌಢಭಾಷೆ, ಅಥವಾ ಸರಳತೆಯೆಡೆಗೆ ಅತಿಧಾರ್ಮಿಕತೆ ಅಥವಾ ಸೆಕ್ಯುಲರ್ ಆಗುವ ಕಡೆಗೆ ಯಾಕೆ ಹೊರಳುತ್ತದೆ, ಅಂತಹ ಸಂಚಲನಕ್ಕೆ ಕಾರಣವಾಗುವ ಸಾಮಾಜಿಕ, ರಾಜಕೀಯ, ಧಾರ್ಮಿಕ ಒತ್ತಡ ವಿನ್ಯಾಸಗಳು ಯಾವುವೆಂಬುದನ್ನು ಅರಿಯುವುದು ಅನಿವಾರ್ಯ. ಅದರಲ್ಲೂ ಆಶಯ ಆಕೃತಿಗಳ ಬದಲಾವಣೆ ಒಂದು ನಿರಂತರ ಪ್ರಕ್ರಿಯೆಯೇ ಆಗಿರುವ ಕನ್ನಡ ಸಾಹಿತ್ಯದಲ್ಲಂತೂ ಇದು ಮತ್ತಷ್ಟು ಅನಿವಾರ್ಯವಾಗಿದೆ.

ವಿಜಯನಗರದ ಪರಮಾಧಿಕಾರವನ್ನು ೧ನೆಯ ರಾಜವಡೆಯರು ಬದಿಗೊತ್ತಿ

* ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆಕಾಲೇಜು ವಿಜಯನಗರ, ಬೆಂಗಳೂರು. ಮೊ: ೯೮೪೫೪೨೭೫೮೧

ಶ್ರೀರಂಗಪಟ್ಟಣದಿಂದ ಸ್ವತಂತ್ರವಾಗಿ ಆಳ್ವಿಕೆ ತೊಡಗಿದಂದಿನಿಂದ ಕ್ರಿ.ಶ. ೧೫೭೮-೧೯೧೭ರವರೆಗೆ ಹಳೇಮೈಸೂರು ಸಂಸ್ಥಾನವು ಒಡೆಯರ ಆಧಿಪತ್ಯಕ್ಕೆ ಒಳಪಟ್ಟಿತ್ತು. ಚಿಕ್ಕದೇವರಾಜ ಒಡೆಯರದು ಮೈಸೂರರಸರಲ್ಲಿ ನಾನಾ ಕಾರಣಗಳಿಗೆ ಎದ್ದು ಕಾಣುವ ವ್ಯಕ್ತಿತ್ವ. ಅವರು ರಾಜ್ಯ ವಿಸ್ತರಣೆಯಲ್ಲಿ ಹಿಂದೆ ಬೀಳಲಿಲ್ಲ. ಅನೇಕ ಹೊಸ ಆಡಳಿತ ಪ್ರದೇಶಗಳನ್ನು ಗೆದ್ದುಕೊಂಡರು. ದೆಹಲಿಯ ಸುಲ್ತಾನರೊಂದಿಗೆ ಉತ್ತಮ ರಾಯಭಾರ ಸಂಬಂಧ ಹೊಂದುವ ಮೂಲಕ ಸುತ್ತ ಮುತ್ತಿನ ಶತ್ರು ಬಾಧೆಯಿಂದ ರಕ್ಷಣೆಯನ್ನೊದಗಿಸುವ ಪ್ರಯತ್ನ ಮಾಡಿದರು. ಅವರು ಕೇವಲ ರಾಜನೀತಿ ವಿಚಕ್ಷಣರಾಗಿರಲಿಲ್ಲ. ವಿಸ್ತಾರಗೊಂಡರಾಜ್ಯದಲ್ಲಿ ಆಡಳಿತವನ್ನು ಸುಭದ್ರವೂ, ಸಕ್ರಮವೂ ಆಗಿರುವಂತೆ ರೂಪಿಸಲು ನಾನಾ ಸುಧಾರಣೆಗಳನ್ನು ತಂದರು. 'ಅಠಾರ ಕಚೇರಿ' ಆರಂಭಿಸಿ ಸರ್ಕಾರದ ಆಡಳಿತವನ್ನು ೧೮ ಇಲಾಖೆಗಳಾಗಿ ವಿಂಗಡಿಸಿ ನಡೆಸತೊಡಗಿದರು. ಕಂದಾಯ ಪದ್ಧತಿಯಲ್ಲಿ ಸುಧಾರಣೆ ತಂದು ಬಿಗಿಗೊಳಿಸಿದರು. ಪ್ರತಿಪಟ್ಟಣ ಜಿಲ್ಲೆಗಳಿಗೆ ಅಧಿಕಾರಿಗಳು ಹಾಗೂ ಸಹಾಯಕ ಅಧಿಕಾರಿಗಳನ್ನೂ ಸಿಬ್ಬಂದಿಗಳನ್ನೂ ಸಂಬಳದ ಸೇವಕ, ಸಹಾಯಕ ವರ್ಗವನ್ನೂ ನೇಮಿಸಿ ಗ್ರಾಮಾಡಳಿತಕ್ಕೆ ಒಂದು ಸುವ್ಯವಸ್ಥೆಯನ್ನೂ ಕಲ್ಪಿಸಿದರು. ಆಪ್ತಸಮಾಲೋಚನೆಗೆ ಮಂತ್ರಾಲೋಚನೆಗೆ ವಿಶಿಷ್ಟವಾದ ಮಂತ್ರಿಮಂಡಲವನ್ನು ರಚಿಸಿಕೊಂಡಿದ್ದರು.

ಅವರ ಅಲೋಚನೆಗಳು ಹೆಚ್ಚು ಪ್ರಗತಿಪರವಾಗಿದ್ದವು. ಅವರು ಅಂಚೆಯ ವ್ಯವಸ್ಥೆಯನ್ನು ಆಡಳಿತ ವಹಿಸಿಕೊಂಡೊಡನೇ ಆರಂಭಿಸಿದರು. ಔರಂಗಜೇಬನಿಂದ ಬೆಂಗಳೂರನ್ನು ಕೊಂಡುಕೊಂಡರು. ಅದನ್ನು ಅತ್ಯುತ್ತಮವಾದ ವಾಣಿಜ್ಯ ಉತ್ಪಾದನಾಕೇಂದ್ರವನ್ನಾಗಿ ಮಾಡುವ ದೂರದೃಷ್ಟಿಯನ್ನು ಹೊಂದಿದ್ದು, ೧೨ ಸಾವಿರ ನೇಕಾರರನ್ನು ಕರೆಯಿಸಿ ಅಲ್ಲಿ ವಾಸಿಸಲು ಅನುವು ಮಾಡಿಕೊಟ್ಟರು. ತಯಾರಾದ ಬಟ್ಟೆಗಳನ್ನು ದೇಶದ ನಾನಾ ಭಾಗಗಳಿಗೆ ಮಾರಾಟಮಾಡುವ ವ್ಯವಸ್ಥೆಮಾಡಿದರು. ಇಂದು ಕನ್ನಡಿಗರು ಬೆಂಗಳೂರಿನ ಬಗ್ಗೆ ಹೆಮ್ಮೆ ಪಡುವಾಗ ಕೆಂಪೇಗೌಡನೊಂದಿಗೆ ಚಿಕ್ಕದೇವರಾಜ ಒಡೆಯರನ್ನು ನೆನಪಿಸಿಕೊಳ್ಳಲೇಬೇಕು. ಶ್ರೀರಂಗಪಟ್ಟಣದಲ್ಲಿ ಮದ್ದುಗುಂಡು ಮುಂತಾದ ಯುದ್ಧೋಪಯೋಗಿ ಉಪಕರಣಗಳ ಕೇಂದ್ರವನ್ನು ವ್ಯವಸ್ಥೆಗೊಳಿಸಿದರು.

ಚಿಕ್ಕದೇವರಾಜರು ಸ್ವತಃ ಸಾಹಿತಿಯೂ, ಸಂಗೀತಗಾರರೂ ಆಗಿದ್ದು, ವಿದ್ವಜ್ಜನಪೋಷಣೆಗೆ ವಿಶೇಷ ಮಹತ್ವನೀಡಿದ್ದರಿಂದ ಆ ಕ್ಷೇತ್ರದಲ್ಲಿ ಅಪಾರ ಸಾಧನೆಯಾಯಿತು. ಅದನ್ನು ಗಮನಿಸಿ ೧೭ನೇ ಶತಮಾನದ ಉತ್ತರಾರ್ಧವನ್ನು 'ಕನ್ನಡ ಸಾಹಿತ್ಯದಲ್ಲಿ' ಚಿಕ್ಕದೇವರಾಜ ಯುಗ' ವೆಂದೇ ಪರಿಗಣಿಸಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅವರ ಆಸ್ಥಾನದಲ್ಲಿ ಕವಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ವೇಣುಗೋಪಾಲ ವರಪ್ರಸಾದಿ ಎಂದು ಖ್ಯಾತನಾದ ತಿಮ್ಮಕವಿ, ಮಲ್ಲಿಕಾರ್ಜುನ, ಮಲ್ಲರಸ ಮೊದಲಾದ ಕವಿಗಳೂ ಶೃಂಗಾರಮ್ಮ, ಹೊನ್ನಮ್ಮ ಮೊದಲಾದ ಕವಯಿತ್ರಿಯರು ಆಶ್ರಯ ಪಡೆದು ವಿಶಿಷ್ಟವಾದ ಅಪಾರವಾದ ಸಾಹಿತ್ಯ ಕೃಷಿಯನ್ನು ಮಾಡಿದರು ಮತ್ತು ಇತರರಿಗೆ ಪ್ರೇರಣೆಯನ್ನು, ಪ್ರೋತ್ಸಾಹವನ್ನೂ ನೀಡಿದರು.

ಈ ಕಾಲದ ಸಾಹಿತ್ಯವನ್ನು ಒಟ್ಟಾರೆಯಾಗಿ ಗಮನಿಸಿದಾಗ ಎದ್ದು ಕಾಣುವ ಅಂಶವೆಂದರೆ, ಶ್ರೀವೈಷ್ಣವ ಧರ್ಮವೇ ಈ ಸಾಹಿತ್ಯದ ಪ್ರಧಾನ ಜೀವ ಸೆಲೆಯಾಗಿದೆ ಎಂಬುದು. ಆದರೂ ಈ ಕಾಲದಲ್ಲಿ ಜೈನರೂ ಮತ್ತು ವೀರಶೈವ ಸಂಪ್ರದಾಯದ ಇತರ ಹಲವಾರು ಕವಿಗಳ, ಮಹಾಂತರ ಕೊಡುಗೆಯೂ ಗಮನಾರ್ಹವೇ.

**ಶ್ರೀವೈಷ್ಣವ ಧಾರ್ಮಿಕ ಸಾಹಿತ್ಯ**

ಯಾವುದೇ ಧರ್ಮದ ಏಳಿಗೆ, ಸಾಧನೆ-ಸಿದ್ಧಿಗೆ ರಾಜಪೋಷಣೆಯು ಅವಶ್ಯಕ ಎಂಬುದು ತಿಳಿದ ವಿಚಾರವೇ, ರಾಜಾಶ್ರಯವಿದ್ದರೆ ಧಾರ್ಮಿಕ ಸಾಹಿತ್ಯವಷ್ಟೇಅಲ್ಲ, ಚಿತ್ರಕಲೆ, ಶಿಲ್ಪಕಲೆ ದೇವಾಲಯ ವಾಸ್ತುಶಿಲ್ಪ, ಧಾರ್ಮಿಕ ಆಚರಣೆ, ಉತ್ಸವ-ಜಾತ್ರೆ, ಸಂಪ್ರದಾಯಗಳು ಯಾವ ಬಾಧೆಯಿಲ್ಲದೇ ಎಲ್ಲವರ್ಗದವರನ್ನು ಒಳಗೊಳ್ಳುತ್ತಾ ಅಭಿವೃದ್ಧಿ ಪಡೆಯಲು ಸಾಧ್ಯ. ವೀರಶೈವ ಧರ್ಮ ಹೊರಗೆ ನಿಂತು ತನ್ನ ಧರ್ಮವನ್ನು ಪ್ರಚುರಪಡಿಸುವ ಪ್ರಯತ್ನಮಾಡಿತಾದರೂ ಅದರ ಪುನರುಜ್ಜೀವನಕ್ಕೆ ವಿಜಯನಗರದ ಅರಸರ ಅಧಿಕಾರಿಗಳ ಆಶ್ರಯಬೇಕಾಯಿತೆಂಬುದು ಸತ್ಯವಿಚಾರ. ಇನ್ನು ದ್ವೈತಮತಕ್ಕೆ ರಾಜಗುರು ವ್ಯಾಸರಾಯರು, ಕೃಷ್ಣದೇವರಾಯನ ಆಶ್ರಯವಿದ್ದು, ದಾಸಕೂಟ ವ್ಯಾಸಕೂಟಗಳು ಬಲಗೊಂಡವೆಂಬುದು ನಿರ್ವಿವಾದ.

**ರಾಜಮಾನ್ಯತೆ :** ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನ, ನರಸಿಂಹರಿಂದ ಶ್ರೀವೈಷ್ಣವ ಧರ್ಮಕ್ಕೆ ಸಿಕ್ಕ ಪ್ರೋತ್ಸಾಹದಿಂದಾಗಿ ದಕ್ಷಿಣ ಕರ್ನಾಟಕದುದ್ದಕ್ಕೂ ನಿರ್ಮಾಣಗೊಂಡ ಅಗ್ರಹಾರ-ಅಷ್ಟಮಂಗಲಗಳು, ಕೇಶವಪುರಗಳು, ದೇವಾಲಯಗಳು, ಮಠಗಳು, ಪಡೆದ ದಾನ-ದತ್ತಿಗಳು ಹೊಯ್ಸಳ ಕರ್ನಾಟಕದ ಭಾಗದಲ್ಲಿ ಆ ಧರ್ಮಕ್ಕೆ ಒಂದು ಸದೃಢವಾದ ಬುನಾದಿಯನ್ನು ಹಾಕಿಕೊಟ್ಟಿತ್ತು. ಅಗ್ರಹಾರ ಕೇಶವಪುರಗಳಲ್ಲಿ ಸಂಸ್ಕೃತ, ಕನ್ನಡ, ತೆಲುಗುಗಳೊಂದಿಗೆ ತಮಿಳು ಭಾಷೆ ಹಾಗೂ ಗ್ರಂಥಪಿಲಿಯನ್ನು ಕಲಿಸಲಾಗುತ್ತಿತ್ತು. ದೇವಾಲಯಗಳಲ್ಲಿ ಆಗಮಿಕ ರೀತಿಯ ಪೂಜಾ ಕೈಂಕರ್ಯಗಳೂ, ವೈಕುಂಟೇಕಾದಶಿ, ತಿರುನಾಳುಗಳು, ಚೈತ್ರ ಪವಿತ್ರ ದೀಪೋತ್ಸವಗಳು, ಯುತಿಭಿಕ್ಷೆ, ನೂಲಪರ್ವ, ವಸಂತೋತ್ಸವ, ಕಲ್ಯಾಣೋತ್ಸವಗಳು, ದಿನನಿತ್ಯದ ಪೂಜಾಕೈಂಕರ್ಯ ನೈವೇದ್ಯ, ಧರ್ಮಚಿತ್ರಗಳ ಸೇವೆಗಳಿಗೆಂದು, ಬೀಜಹೊನ್ನುಗಳನ್ನು ನೀಡಿರುವುದು, ಪುದುವಟ್ಟುಗಳನ್ನು ಸ್ಥಾಪಿಸಿರುವುದು, ದೇವರ ತೋಟ, ದೇವರಗದ್ದೆಗಳನ್ನು ದಾನಬಿಟ್ಟಿರುವುದು, ವೇದ ಖಂಡಿಕೆಗಳು, ಪುರಾಣ ಶ್ರವಣಗಳು, ತಿರುವಾಯ್ಮೊಳಿ ಹಾಗೂ ತಿರುವಧ್ಯಯನಗಳಿಗಾಗಿ ಅನೇಕ ಸಂಸ್ಕೃತ -ತಮಿಳು ವಿದ್ವಾಂಸರುಗಳನ್ನು ನಿಯಮಿಸಿ, ಅವರುಗಳಿಗೆ ಭೂದಾನಗಳನ್ನು ನೀಡಿರುವುದನ್ನು ಅನೇಕ ಶಾಸನಗಳು ಹೇಳುತ್ತವೆ.

ಆರಂಭಕಾಲದಲ್ಲಿ ಶೈವರು ಹಾಗೂ ಜೈನರಿಂದ ತೀವ್ರ ಪ್ರತಿರೋಧವನ್ನು ಎದುರಿಸಬೇಕಾಗಿ ಬಂದರೂ ಶ್ರೀವೈಷ್ಣವ ಧರ್ಮ ಕರ್ನಾಟಕದ ನೆಲದಲ್ಲಿ ಬೇರುಬಿಡತೊಡಗಿತು. ನಿಧಾನವಾಗಿ ಸಾಮಾಜಿಕ, ಆಡಳಿತ ಕ್ಷೇತ್ರದಲ್ಲಿ ಶ್ರೀ ವೈಷ್ಣವರು ಸದೃಢವಾಗಿ ಕಾಲೂರಿದುದನ್ನು, ಕೇವಲ ಅರಸುಗಳ ಅಧಿಕಾರೀ ವರ್ಗದಷ್ಟೇ ಅಲ್ಲ

ಗಮನಿಸಿಲ್ಲ. ಈತ ಓದಿಕೊಂಡಿದ್ದು ಸಂಸ್ಕೃತ, ಕನ್ನಡ ಕೃತಿಗಳನ್ನು, ಹಳೆಗನ್ನಡದ ವಿಭಕ್ತಿಪ್ರತ್ಯಗಳನ್ನು ಬಿಟ್ಟರೆ ಈತನ ಕಥನದ ಮಾದರಿ ತೀರ ಹೊಸದಾಗಿದೆ. ಮುದ್ರಾಮಂಜೂಷಾವನ್ನು ಆಧುನಿಕ ಕಾದಂಬರಿ ಎಂದು ಕರೆದವರೂ ಇದ್ದಾರೆ. ಅವನ ಗದ್ಯದ ಹೊಸತನಕ್ಕೆ ಅಥವಾ ಕನ್ನಡ ಗದ್ಯವು ಹೊಸಗನ್ನಡಕ್ಕೆ ತಿರುಗುತ್ತಿದ್ದ ನಿದರ್ಶನಕ್ಕೆ ಅವನ ಕೃತಿಯೊಳಗಿಂದ ಕೆಲವು ನಿದರ್ಶನಗಳನ್ನು ನೀಡಬಹುದಾದರೇ:

**ಮಾದರಿ–೧** "ಲೋಕದಲ್ಲಿ ಕೋಪವೆಂಬುವು ಲೌಕಿಕ ವ್ಯವಹಾರಕ್ಕೆ ಸಾಧನವೇ ಹೊರತು ನಿರರ್ಥಕವಲ್ಲ. ಕೋಪವಿಲ್ಲದವನು ಹೆಣ್ಣು ಕುರಿಯಂತೆ ಲೋಕದ ಜನಕ್ಕೆ ಸುಲಭನಾದಾನು. ರಾಜನು ಕೋಪಿಷ್ಠನಾಗಿದಲ್ಲಿ ಪ್ರಜೆಗಳು ರಾಜಜ್ಞೆಯಂ ಮೀರಿದರೆ ಪ್ರಭುವಿನ ಕೋಪಕ್ಕೆ ಪಾತ್ರರಾಗಿ ದಂಡನಿಗೆ ಯೋಗ್ಯರಾದವರೆಂದು ಭೀತಿಯಿಂದ ತಗ್ಗಿ ನಡೆಯುವರು"[೮]

ಪತ್ರ ವ್ಯವಹಾರದ ಸಂದರ್ಭ ಎದುರಾದಾಗ ಕೆಂಪುನಾರಾಯಣನು ಬಳಸುವ ಕಥನವನ್ನು ಗಮನಿಸಿ.

**ಮಾದರಿ–೨** "ಶ್ರೀಮತು ನಮ್ಮ ಪರಮ ಪ್ರಿಯರಾದ ಕಾಶೀರಾಜರಿಗೆ ನಂದರು ಮಾಡುವ ವಿಜ್ಞಾಪನೆ ಏನೆಂದರೆ –ನೀವು ಕಳುಹಿಸಿಕೊಟ್ಟ ಎರಡು ಕಾಗದಗಳು ಬಂದು ತಲುಪಿದವು. ಅವುಗಳ ಅಭಿಪ್ರಾಯವು ತಿಳಿಯಲಾಯಿತು. ತಮಗೂ ಇರುವ ಮಿತ್ರತ್ವವನ್ನರಿಯದೆ ಪರ್ವತರಾಜನು ಮೂಢತನದಿಂದ ನಿಮಗೆ ಬರೆಸಿ ಕಳುಹಿಸಿರುವುದು ನಮ್ಮ ಕಾರ್ಯಕ್ಕೆ ಅನುಕೂಲವೇ ಅಯಿತು".[೯]

ಮೇಲಿನ ಎರಡು ಮಾದರಿಗಳು ಹೊಸಗನ್ನಡದ ಆರಂಭದ ದಿಕ್ಕುಗಳನ್ನು ಗಟ್ಟಿಯಾಗಿ ಸೂಚಿಸುತ್ತವೆ ಮಾತ್ರವಲ್ಲ ಈ ಮಾದರಿಗಳು ಕಡತಂದ ಸಿದ್ಧಾಂತಗಳಿಂದ ಒಳಗೊಂಡಿಲ್ಲವೆಂದೂ ಹೇಳಬಹುದು. ಸಂಸ್ಕೃತದ ಮಾದರಿಯನ್ನು ಕಡಿಮೆಗೊಳಿಸುವ ಆತುರವೂ ಇದೆ. ಅರ್‌ಕಾವೊತ್ತನ್ನು ಕಡಿಮೆಗೊಳಿಸುವ ಯತ್ನವೂ ಇದೆ. ಎರಡನೇ ಮಾದರಿಯಾಂತೆ ಕೆಂಪುನಾರಾಣ ತನ್ನ ಕಾಲದ ವ್ಯವಹಾರದ ಕನ್ನಡ ಭಾಷೆಯ ನುಡಿಗಟ್ಟುಗಳನ್ನು ಬಳಸಿದ್ದಾನೆ. ಹಾಗಾಗಿ ಈತನ ಗದ್ಯದ ಮಾದರಿಯು ಜನಭಾಷೆಗೆ ಆ ಮೂಲಕ ಹೊಸಬಗೆಯ ಕನ್ನಡದ ದಾರಿಗಳನ್ನು ವಿಸ್ತೃತವಾಗಿ ಅನಾವರಣ ಮಾಡುತ್ತದೆ.

**ದೇಸಿ ಮತ್ತು ಮೌಖಿಕ ಪಠ್ಯಗಳಿಂದ ರಾಜಶಾಹಿ ಮತ್ತು ವಸಾಹತುಶಾಹಿಗೆ ಒಟ್ಟಿದ ಪ್ರತಿರೋಧ**

ಜನಪದ ಲೋಕದೃಷ್ಟಿಯೇ ಹಾಗೆ, ತನಗೆ ವಿರುದ್ಧವಾದ ಯಾವುದನ್ನು ಅಷ್ಟು ಬೇಗ ಒಳಗೆ ಸೇರಿಸಿಕೊಳ್ಳುವುದಿಲ್ಲ. ಇದು ಎಲ್ಲ ಕಾಲಕ್ಕೂ ಸರಿಯೇ. ಆತ್ಮ ಸಾಕ್ಷಿ ಅಥವಾ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿಯಾದಾಗೆಲ್ಲ ಇದು ಎಂದೂ ರಾಜಿಗೆ

ಒಳಗಾಗುವುದಿಲ್ಲ ಎನ್ನುವುದಕ್ಕೆ ೧೮-೧೯ನೇ ಶತಮಾನದಲ್ಲಿ ರಚಿತಗೊಂಡ ಲಾವಣಿಗಳು, ತತ್ವಪದಗಳು, ಐತಿಹ್ಯಗಳೇ ನಿದರ್ಶನ. ರಾಜಶಾಹಿಯನ್ನು, ವಸಾಹತುಶಾಹಿಯನ್ನು ಏಕಕಾಲಕ್ಕೆ ವಿರೋಧಿಸುವ ಈ ಪಠ್ಯಗಳು ತಮ್ಮದೇ ಆದ ನಿಲುವನ್ನು ವ್ಯಕ್ತಪಡಿಸುತ್ತವೆ. ಹಾಗೆ ನೋಡಿದರೆ ಆ ಕಾಲಘಟ್ಟದ ಒಡೆಯರು ಸ್ವಂತಿಕೆಯನ್ನು ಅಸ್ತಿತ್ವವನ್ನು ಕಳೆದುಕೊಂಡಿದ್ದರೂ. ಇವರು ಎಳೆದುಕೊಂಡಿರಲಿಲ್ಲ. ಕಂಪನಿ ಸರ್ಕಾರದ ವಿರುದ್ಧ ದಂಗೆ ಎದ್ದು ದೇಸೀ ಗುರುತುಗಳನ್ನು ಕಾಪಾಡುವುದಕ್ಕೆ ಹಾತೊರೆದರು. ಇದೇ ಕಾಲದಲ್ಲಿ ಕರ್ನಾಟಕ ಪ್ರದೇಶದಲ್ಲಿ ಮಾತ್ರವಲ್ಲ ಪಕ್ಕದ ರಾಜ್ಯಗಳಲ್ಲಿ ಈ ಮಾದರಿಗಳನ್ನು ಕಾಣಬಹುದು. ಮುಮ್ಮಡಿಯ ಕಾಲದ ಆಚೆ-ಈಚೆ ಸೂಕ್ಷ್ಮವಾಗಿ ಗಮನಿಸಿದರೆ ಅರಿವಾಗುವುದು ತಟ್ಟನೆ ನಮಗೆ ನೆನಪಾಗುವುದು ಹಲಗಲಿ ಬೇಡರು ಮತ್ತು ಕಿತ್ತೂರಿನ ಸಂಗೊಳ್ಳಿರಾಯಣ್ಣ; ಬೇಡರು ಮತ್ತು ಸಂಗೊಳ್ಳಿ ರಾಯಣ್ಣರು ಕಂಪನಿಯ ಪ್ರಭುತ್ವಕ್ಕೆ ಸೆಡ್ಡು ಹೊಡೆದದ್ದು ತಳಮಟ್ಟದ ಚರಿತೆಯಾಗಿದೆ. ಒಡೆಯರಿಗಿಂತ ವಸಾಹತುಶಾಹಿಯ ಆಕ್ರಮಣವನ್ನು ಭೀತಿಯಿಲ್ಲದೆ ಎದುರಿಸಿದರು. ಇದರ ತಾತ್ವಿಕತೆ ಎಂದರೆ ಅಂದಿನ ರಾಜತ್ವ ವಿಶೇಷವಾಗಿ ಮುಮ್ಮಡಿ ಒಡೆಯರು ಬ್ರಿಟಿಷ್ ಸವಾರ್ಧಿಕಾರವನ್ನು ಎದುರಿಸುವ ಪ್ರಶ್ನಿಸುವ ಅಧಿಕಾರ ಕಳೆದುಕೊಂಡಿದ್ದರು. ಆದರೆ ಆಕಾಲದ ಹಲಗಲಿಯ ಬೇಡರಂಥ ಜನಪದರು ಈ ನೆಲದ ವಾರಸತ್ವವನ್ನು ಬಿಟ್ಟುಗೊಡಲು ಸಿದ್ಧರಿರಲಿಲ್ಲ. ಸೃಜನಶೀಲತೆಯನ್ನು ಎಗ್ಗಿಲ್ಲದೆ ಪ್ರಕಟಿಸಿದ್ದಾರೆ. ತತ್ವಪದಗಳಲ್ಲಿ ಕಾಣುವ ವಸಾಹತುಷಾಹಿಯ ವಿರೋಧ ಕೈವಾರ ನಾರಾಣಯಪ್ಪನ ಕಾಲಜ್ಞಾನಪದಗಳಲ್ಲಿ ಕೂಡಾ ಇದೇ ರೀತಿಯ ವಿರೋಧವಿದೆ. ವಿಶೇವಾಗಿ ಶರೀಫನ ಪದಗಳಲ್ಲಿ ಇದನ್ನು ಕಾಣಬಹುದು. "ಶರೀಫನ ರಚನೆಗಳ ಮತ್ತೊಂದು ನೆಲೆ ಶೋಷಣೆ ದಬ್ಬಾಳಿಕೆಗಳ ವಿರುದ್ಧ ಎತ್ತಿರುವ ಧ್ವನಿ. ಪ್ರಭುತ್ವದ ಶೋಷಣೆಗೆ ಗುರಿಯಾಗಿದ್ದುದರಿಂದ ತಮ್ಮ ಅನಿಸಿಕೆಗಳನ್ನು ಆಲೋಚನೆಗಳನ್ನು ನೇರವಾಗಿ ಪ್ರತಿಪಾದಿಸುವ ಈ ಕಾಲದ ಕೆಲವು ಸೂಕ್ಷ್ಮ ಒತ್ತಡಗಳನ್ನು ಬಯಲುಗೊಳಿಸುವಂತೆ ಕಾಣುತ್ತವೆ. ರಾಜಪ್ರಭುತ್ವ ಮತ್ತು ಸಾಮ್ರಾಜ್ಯಶಾಹಿಗಳ ಒಪ್ಪಂದವನ್ನು ದೇಶೀ ಸತ್ವದ ಉಳಿವಿಗಾಗಿ ತಮ್ಮ ಪರಿಮಿತಿ ಸಾಧನಗಳ ಮೂಲಕ ಹೋರಾಡಿದ ಸಮುದಾಯ ಈ ಕಾಲಮಾನದ ದೊಡ್ಡ ಒತ್ತಡ"[೧೦] ಕಿ.ರಂ. ಅವರ ಈ ಮಾತುಗಳು ಅದಷ್ಟೇ ಹೇಳುತ್ತವೆ. ಶರೀಫರಲ್ಲದೆ ನಾಗಲಿಂಗ ಸ್ವಾಮಿ, ಕಡಕೋಳ ಮಡಿವಾಳಪ್ಪ, ಸರ್ಪಭೂಷಣ ಶಿವಯೋಗಿ ಮುಂತಾದವರ ಪದಗಳಲ್ಲಿ ಈ ಬಗೆಯ ಪ್ರತಿರೋಧವನ್ನು ಕಾಣಬಹುದು. ಈ ಕಾಲದ ಮತ್ತೊಬ್ಬ ತತ್ವಪದಕಾರನಾದ ಬಾಲಲೀಲ ಮಹಾಂತಶಿವಯೋಗಿ ಮುಮ್ಮಡಿ ಕೃಷ್ಣರಾಜ ಒಡೆಯರು ನೀಡಿದ ಸ್ವಾಗತಕ್ಕೆ ಒಡ್ಡಿದ ಪ್ರತಿರೋಧವನ್ನು ಗಮನಿಸಬಹುದು.

> ನೀನೆಲ್ಲಿ ನಿನ್ನ ದೇಶಲ್ಲಿ ಕೇಳಲೇರಾಜ
> ನಾನೆಲ್ಲಿ ನಾನಿರುವ ಸುಡುಗಾಡಠಾವೆಲ್ಲಿ
> ಏನಾಶಪಾಶದಲಿ ಬಿಗಿದೆನ್ನಕಟ್ಟಿದೆಯೋ ಕಳ್ಳರನು
> ಕಟ್ಟುವರೂಡಿ

ಬಾಲಬ್ರಹ್ಮಿಯ ನಾನು ಬಳಸಿ ಬ್ರಹ್ಮಿಯು ನೀನು
ಬಹಳ ಹೇಳುವುದೇನು ತಿಳುವಳಿಕೆ ರಾಜನಿಗೆ.
ಮೇಲೆ ಚಂದದ ಸುಖವು ಒಗೇನು ಸುಖವಿಲ್ಲ ಮೈಸೂರ
ಮೈಚೂರವೋ
ನಮ್ಮ ಸುಖ ದುಃಖಗಳ ಕೇಳುವರು ಯಾರಿಲ್ಲ
ನಮ್ಮ ಸುಖ ಮೂಕ ಸಕ್ಕರೆ ಮೆದ್ದ ಪರಿಯಂತೆ
ನಮ್ಮ ದುಃಖವು ಕಳ್ಗೆ ಚೇಳೂರಿದಂತಿಹುದು
ಹುರುಳಿಲ್ಲ ಎಲೆ ರಾಜನೇ
ವಸುಧಿಪನೆ ನಿನ್ನ ಮೈಸೂರೆಂಬ ಬೆಲ್ಲದ
ಮುಸುರಿಗಡಿಗೆಗೆ ಲಕ್ಷಗಟ್ಲೆ ಭೀಕ್ಷುಕರೆಂಬ
ಸಸಿನೆ ಮುಕ್ಷಿಕದಂಡು ಮುಸುಕಿಹುದದೇನೆಂಬ ಮುತ್ತಿಗೆಯ
ಹಾಕಿದಂತೆ" ॥

(ಕೈವಲ್ಯ ದರ್ಪಣ: ಬಾಲಲೀಲ ಮಹಾಂತ ಶಿವಯೋಗಿ)

ಇಲ್ಲಿಮಹಾಂತ ಶಿವಯೋಗಿಗಳು ಏಕಕಾಲಕ್ಕೆ ಜನಪರರಾಗಿದ್ದು ಜನ ವಿರೋಧಿಯಾಗಿದ್ದ ವಸಾಹತುಶಾಹಿ ಮತ್ತು ರಾಜತ್ವವನ್ನು ಟೀಕಿಸಿದ್ದಾರೆ. ಅನುಭಾವದ ನುಡಿಗಟ್ಟಿನಲ್ಲಿ ಸಮಕಾಲೀನ ಒತ್ತಡಗಳಿಗೆ ಎದುರೀಜು ಮಾಡುವುದು ಈ ಕಾಲದ ತತ್ವ ಪದಕಾರರಿಗೆ ಸಾಧ್ಯವಾಗಿದೆ. ಇದು ಲೋಕದೃಷ್ಟಿಯೊಂದನ್ನು ಕಾಪಿಡುವ ಕೆಲಸವೂ ಆಗಿತ್ತು. ಇನ್ನು ಕಾಲಜ್ಞಾನ ಪದಗಳೂ ಇದಕ್ಕೆ ಸ್ಪಂದಿಸಿದ ರೀತಿಯನ್ನು ನಾವು ಮನಗಾಣಬೇಕು. ಜನರ ಮಧ್ಯೆ ಇದ್ದುಕೊಂಡೆ ಪರದೇಶದ ಆಕ್ರಮಣವನ್ನು ತಮ್ಮ ಜ್ಞಾನದ ಚೌಕಟ್ಟಿನಲ್ಲಿ ವಿರೋಧಿಸಿದ್ದು ಕೋಲಾರದ ಸಂತ ಕೈವಾರ ತಾತಯ್ಯ. ತನ್ನ ನಾರಾಯಣಿ ಶತಕ ಮತ್ತು ಕಾಲಜ್ಞಾನದಲ್ಲಿ 'ಪರಂಗಿ' ಎಂಬ ನುಡಿಗಟ್ಟಿನಿಂದ ತಾತಯ್ಯ ಬ್ರಿಟಿಷರನ್ನು ವಿರೋಧಿಸಿದ್ದಾರೆ.

ತಮಲೋನೆ ತಮಕು ಕಲಹಮಪಡಿ
ಚತ್ತರು ಪರಂಗಿವಾರು–ಪಟ್ಲಮು ಪಾಡೌನು
ಪ್ರಜಲಕು ಕ್ಷೇಮಮು
ನಿಂಡಾ ಪರತತ್ವ ಪ್ರಚಂಡ ನಾರೇಯಣ ಕವಿ.[೨೨]

ಪೋರ್ಚುಗೀಸರು, ಬ್ರಿಟಿಷರು ಮುಂತಾದವರು ಭಾರತಕ್ಕೆ ವಸಾಹತುಶಾಹಿಯ ನಿರ್ಮಿಸಿದ ಬಗೆಯನ್ನು ತಾತಯ್ಯ ಹೇಳುತ್ತಿದ್ದಾರೆ. ಕೊನೆಗೆ ಇವರ ಆಡಳಿತ ಅಂತ್ಯವಾಗಿ ನಾಡು ಸ್ವತಂತ್ರ ವಾಗುವುದು ಎಂಬ ನಿಲುವುಗಳು ತಾತಯ್ಯನಲ್ಲಿ ಬರುತ್ತವೆ.

ಇವರಲ್ಲದೆ ಆಂಧ್ರದ ವೀರಬ್ರಹ್ಮಯ್ಯನ ಕಾಲಜ್ಞಾನ ಪದಗಳಲ್ಲೂ ಇದೇ ಬಗೆಯ ಧೋರಣೆಗಳಿವೆ. ಕರ್ನಾಟಕದ ಹಲಗಲಿಯ ಬೇಡರಂತೆ ಮಹಾರಾಷ್ಟ್ರದ ಆದಿವಾಸಿಗಳಾದ ಬಿಲ್ಲ ಜನ ದಂಗೆಯನ್ನು ನೆನಪಿಸಿಕೊಳ್ಳಬಹುದು. ಆದರೆ ಇವೆಲ್ಲ ಒಳಒಪ್ಪಂಗಳಿಂದ

ನಶಿಸಿದವು ಅಷ್ಟೇ ವಿನಾ ತಾವಾಗಿಯೇ ಶರಣಾದವರಲ್ಲ. ಹೀಗೆ ಈ ಕಾಲಮಾನದ ಒಟ್ಟು ಚರಿತೆಯ ಪುಟಗಳಲ್ಲಿ ಸಾಹಿತ್ಯಕ ಸಾಂಸ್ಕೃತಿಕವಾಗಿ ನಡೆದ ಸಂಗತಿಗಳು ಕುತೂಹಲಕಾರಿಯಾದವು. ಈ ಕಾಲದ ಆಧುನಿಕತೆ ಒಂದು ಮುಖವಿಲ್ಲ. ಅಥವಾ ಆಧುನಿಕತೆ ಎನ್ನುವುದು ಹಾಗೆ ಇರದೆ ಇರುವುದು ಕೂಡಾ ಒಂದು ಪ್ರಕ್ರಿಯೆ.*

**ಅಡಿ ಟಿಪ್ಪಣಿಗಳು**

೧. ಪುಟ ೨೯-೩೦ - ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ, ಚಾರಿತ್ರಿಕ ರೂಪುರೇಷೆ, ಡಿ.ಡಿ. ಕೊಸಾಂಬಿ - ಚಿಂತನ ಪ್ರಕಾಶನ.

೨. ಪುಟ ೧೨- ಮೈಸೂರು ನೂರಿನ್ನೂರು ವರ್ಷಗಳ ಹಿಂದೆ -ಪಿ.ವಿ. ನಂಜರಾಜ ಅರಸು, ಅಭಿರುಚಿ ಪ್ರಕಾಶನ.

೩. ಪುಟ ೧೧೫- ಪೃಥ್ವಿಯಲ್ಲೊದಗಿದ ಘಟವು - ಕರ್ನಾಟಕದ ನಿನ್ನೆಗಳು -ಮನು ವಿ.ದೇವದೇವನ್ - ಅಕ್ಷರ ಪ್ರಕಾಶನ

೪. ಪುಟ ೪ ಡಾ॥ ಫಡಿನಾಂಡ್ ಕಿಟೆಲ್, ಡಾ ಶ್ರೀನಿವಾಸ ಹಾವನೂರು, ಸಾಹಿತ್ಯ ಅಕಾಡಮಿ

೫. ಪುಟ ೩೪೨, ದೇವಚಂದ್ರನ ಸಂಪುಟ ರಾಜಾವಳಿ ಕಥಾಸಾರ ಸಂಪಾದಕರು : ಪ್ರೊ ಹೆಚ್.ಜೆ.ಲಕ್ಷ್ಮಣಗೌಡ - ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬ ಪುಟ - ೫೦, ಗತ ಕಥನ - ರಾಜಾರಾಮ ಹೆಗಡೆ - ಆನಂದ ಕಂದ ಗ್ರಂಥಮಾಲೆ ಮಲ್ಲಾಡಿಹಳ್ಳಿ.

೭. ಪುಟ ೪ ಡಾ॥ ಫಡಿನಾಂಡ್ ಕಿಟೆಲ್, ಡಾ ಶ್ರೀನಿವಾಸ ಹಾವನೂರು, ಸಾಹಿತ್ಯ ಅಕಾಡಮಿ.

೮. ಪುಟ-೬೦ ಮುದ್ರಾ ಮಂಜೂಷವು, ಕೆಂಪುನಾರಾಯಣ, ಪ್ರಕಾಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ (೧೯೮೫)

೯. ಅದೇ, ಪುಟ-೧೦೨

೧೦. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ -೫ ಲೇಖನ, ಈ ಕಾಲದ ಅನುಭಾವ ಸಾಹಿತ್ಯ, ಕಿ.ರಂ. ನಾಗರಾಜ, ಪುಟ -೩೮೬

೧೧. ಅದೇ, ಪುಟ ೩೮೭ ಕಿ.ರಂ. ಅವರ ಅನುಭಾವ ಸಾಹಿತ್ಯ ಎಂಬ ಲೇಖನದಿಂದ ಆರಿಸಿಕೊಳ್ಳಲಾಗಿದೆ.

೧೨. ಪುಟ-೨೭-೨೮ ಪ್ರಚಂಡ ನಾರಾಯಣ ಕವಿ ಪದ್ಯಗಳು, ಶ್ರೀಯೋಗಿ ನಾರಾಯಣ ವಿರಚಿತ ಕಾಲಜ್ಞಾನ, ಪ್ರಕಾಶಕರು ಶ್ರೀ ಯೋಗಿ ನಾರಾಯಣ ಯತೀಂದ್ರರ ಆಶ್ರಮ ಟ್ರಸ್ಟ್, ಕೈವಾರ. ಚಿಂತಾಮಣಿ ತಾಲ್ಲೂಕು ೧೯೮೪.

* ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಹಾಗೂ ಎಂ.ಇ.ಎಸ್. ಕಾಲೇಜಿನ ಕನ್ನಡ ಸ್ನಾತಕೋತ್ತರ ಕೇಂದ್ರದ ಸಹಯೋಗದಲ್ಲಿ ದಿನಾಂಕ : ೨-೫-೨೦೧೪ರಂದು ನಡೆದ 'ಕನ್ನಡ ಸಾಹಿತ್ಯ ಪರಂಪರೆ ಮತ್ತು ಅಂದಿನ ಸಂದರ್ಭ' ಎಂಬ ವಿಚಾರ ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧ : ವಿವೇಚನೆ:೧೧

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೮

# ೭. ಮಾನವನ ಮೃತ್ಯು ಪತ್ರ – ಒಂದು ನೋಟ

–ಡಾ. ವಿಜಯಾಸುಬ್ಬರಾಜ್*

ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರವಾದ ಕೊಡುಗೆ ನೀಡಿರುವ ಶ್ರೀರಂಗರದು ಬಹುಮುಖ ಪ್ರತಿಭೆ. ಈ ಪ್ರತಿಭೆ ತೀಕ್ಷ್ಣತರವಾದ್ದು; ಚಿಂತನಶೀಲವಾದ್ದು. ಕಥೆ, ಕಾದಂಬರಿ, ಪ್ರಬಂಧ, ವೈಚಾರಿಕ ಲೇಖನ ಇತ್ಯಾದಿ ಇತ್ಯಾದಿ ಎಲ್ಲ ಪ್ರಕಾರಗಳಲ್ಲೂ ತಮ್ಮ ಪ್ರಯೋಗಶೀಲತೆಯನ್ನು ತೋರಿಸಿ ಕೊಟ್ಟಿರುವರಾದರೂ ಕನ್ನಡ ರಂಗಭೂಮಿಗೆ ಅವರ ಕೊಡುಗೆ ದೈತ್ಯ ಪ್ರಮಾಣದ್ದು. ಅವರ ರಂಗಸಾಹಿತ್ಯ ಮತ್ತು ಸೃಜನಶೀಲ ನಾಟಕಗಳ ಸಂಖ್ಯೆ ಅಪಾರವಾದದ್ದು. ಪೂರ್ಣ ಪ್ರಮಾಣದ ನಾಟಕಗಳು, ಏಕಾಂಕಗಳು ಎಲ್ಲವೂ ಸೇರಿದರೆ ಎಪ್ಪತ್ತಕ್ಕೂ ಹೆಚ್ಚಿನ ಸಂಖ್ಯೆಯಾದೀತು. ಇಷ್ಟು ಪ್ರಮಾಣದಲ್ಲಿ ಕೃತಿ ರಚನೆ ಮಾಡಿದ ಶ್ರೀರಂಗ ಸ್ವಭಾವತಃ ಪ್ರಗತಿಪರರೂ, ವಿಚಾರವಾದಿಗಳೂ, ಚಿಂತಕರೂ ಆಗಿರುವುದರಿಂದ ಹಲವಾರು ಅಮೂರ್ತ ವಿಷಯಗಳ ಬಗ್ಗೆ ಗಂಭೀರ ಚಿಂತನೆ ನಡೆಸಿ, ಅವುಗಳ ಬಗ್ಗೆ ತಮ್ಮದೇ ಆದ ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಆದರೆ ಆ ಚಿಂತನೆಗಳು, ಅಭಿಪ್ರಾಯಗಳು ಸಾರ್ವತ್ರಿಕ ಒಪ್ಪಿಗೆ ಪಡೆದಿವೆ ಎಂದೇನೂ ಅಲ್ಲ. ಮಾನವ ಕೇಂದ್ರಿತ ಚಿಂತನೆಗಳು ಹಲವು ಶಿಸ್ತುಗಳ ಮೂಲಕ ನಡೆದಿವೆ. ಜೀವ ವಿಕಾಸ, ನಾಗರಿಕತೆಯ ಬೆಳವಣಿಗೆ, ಮನುಷ್ಯನ ಭೌತಿಕ, ಬೌದ್ಧಿಕ ವಿಕಾಸದ ಮಜಲುಗಳು ಇತ್ಯಾದಿಗಳನ್ನು ವಿಕಾಸವಾದ, ಮಾನವಶಾಸ್ತ್ರೀಯ ನೆಲೆಗಳಿಂದ ವಿಶ್ಲೇಷಣೆಗೆ ತೊಡಗುತ್ತಾರೆ. ಇಂತಹ ಚಿಂತನಪರ ಲೇಖನಗಳ ಕೇಂದ್ರ ಪ್ರಜ್ಞೆ ಜಿಜ್ಞಾಸೆಯೇ ಆಗಿದೆ. ವರ್ತಮಾನದ ಮಾನವ ಸಮಾಜದಲ್ಲಿ ಅವನ ಬೌದ್ಧಿಕ ವಿಕಾಸದ ಹಂತಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಸ್ಥಿತ್ಯಂತರಗಳನ್ನು ಗಮನಿಸುತ್ತಲೇ, ಮಾನವ ಸೃಷ್ಟಿಮೂಲದಿಂದ ಇಂದಿನವರೆವಿಗೂ ಅವನೊಡನಾಟದಲ್ಲಿಯೇ ಬರುವ ನಿಸರ್ಗದೊಂದಿಗಿನ ಅವನ ಸಂಬಂಧಗಳಲ್ಲಿ ಆಗುತ್ತಿರುವ ಪರಿವರ್ತನೆಗಳ ಪರಿಣಾಮದ ದುರಂತವನ್ನು ಊಹಿಸುತ್ತಿರುವ ಶ್ರೀರಂಗರು, ಹಂತಹಂತವಾಗಿ ವಿಶ್ವರಚನೆಯಲ್ಲಿನ ಚೇತನ ಅಚೇತನಗಳು

* ನಿವೃತ್ತ ಕನ್ನಡ ಪ್ರಾಧ್ಯಾಪಕರು, #೫೧, 'ಹಂಸಿ' ೧ನೇ 'ಎ' ಕ್ರಾಸ್, ೩೫ನೇ ಮೈನ್, ಬನಗಿರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦೦೮೫. ಮೊ: ೯೯೮೬೯೨೮೮೭೬.

ಪ್ರಾಣಿ ಮಾನವ ಸಂಬಂಧ ಸ್ವರೂಪಗಳು, ಅವುಗಳ ವಿಕಾಸದ ಕ್ರಮಗಳ ಬಗ್ಗೆ ತರ್ಕಬದ್ಧ ವಿಚಾರಗಳನ್ನು ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ನಡೆಸಿದ ಅನುಸಂಧಾನದ ಫಲವಾಗಿ ಮೂಡಿಬಂದಿರುವ ಕೃತಿಯೇ 'ಮಾನವನ ಮೃತ್ಯುಪತ್ರ'. ಈ ಹೆಸರೂ ಕೂಡಾ ಅತ್ಯಂತ ಧ್ವನಿಪೂರ್ಣವಾಗಿದೆ. ಮಾನವ ವಿಕಾಸದ ಅಂದರೆ ಭೌತಿಕ, ಬೌದ್ಧಿಕ ವಿಕಾಸದ ಅವಸ್ಥಾಂತರಗಳನ್ನು ವಿವರಿಸುತ್ತಾ ಒಂದು ಕಡೆ ಮಾನವನ ಪ್ರಗತಿಯ ಬಗ್ಗೆ ಹೆಮ್ಮೆ ಪಡುವಂತೆನಿಸಿದರೂ, ಆ ಪ್ರಗತಿಯಲ್ಲಿನ ವೇಗ ಮತ್ತು ಅವನಲ್ಲಿನ ಮಹತ್ವಾಕಾಂಕ್ಷೆ, ಸ್ವಾರ್ಥ ತನ್ನನ್ನು ಪೋಷಿಸಿ, ಪಾಲಿಸಿದ ನಿಸರ್ಗವನ್ನೇ ತನ್ನ ಬುದ್ಧಿಯ ಮೂಲಕವಾಗಿ ಕಂಡು ಹಿಡಿದ ವಿಜ್ಞಾನ, ತಂತ್ರಜ್ಞಾನದ ಬಳಕೆಯಿಂದ ತನ್ನ ಅಧೀನವಾಗಿಸಿಕೊಂಡು, ತನ್ನ ಅಗತ್ಯಗಳಿಗಾಗಿ ನಿಸರ್ಗನಾಶಕ್ಕೆ ಮುಂದಾಗುತ್ತಿರುವ ಮಾನವನ ಉಳಿವಿನ ಬಗ್ಗೆಯೇ ಆತಂಕಗೊಂಡಿರುವ ಲೇಖಕರ ಮನಸ್ಸಿಗೆ, ಮಾನವನು ತನ್ನ ಸಾವನ್ನು ತಾನೇ ಬರಮಾಡಿಕೊಳ್ಳುತ್ತಿದ್ದಾನೆ ಎನಿಸಿರುವುದರಿಂದ ಅದು 'ಮೃತ್ಯುಪತ್ರ'ವೆಂಬ ಭಾವನೆಗೆ ದಾರಿ ಮಾಡಿದ್ದರೆ ಆಶ್ಚರ್ಯವಿಲ್ಲ. ಆದ್ದರಿಂದ ಈ ಕೃತಿ ಮಾನವನ ವಿಕಾಸದ ಚರಿತ್ರೆಯೂ ಹೌದು; ವಿನಾಶದ ಚರಿತ್ರೆಯೂ ಹೌದು. ಮೊದಲಿಗೆ ಈ ಕೃತಿ ಮಾನವನ ಮಹಾಭಾರತ ಎಂಬ ಹೆಸರಿನಲ್ಲಿ ಸುಮಾರು ೫೦-೬೦ ವರ್ಷಗಳಿಗೂ ಮುಂಚೆ ಮುಂಬಯಿ ಮಾಸ ಪತ್ರಿಕೆಯಲ್ಲಿ ಲೇಖನ ಮಾಲೆಯ ಭಾಗವಾಗಿ ಪ್ರಕಟವಾಗಬೇಕಿತ್ತಾದರೂ, ಸಂಪಾದಕರಿಗೆ ಲೇಖನಗಳಲ್ಲಿನ ಶೀರ್ಷಿಕೆಯಾಗಲೀ ವಿಚಾರಗಳಾಗಲಿ ಒಪ್ಪಿತವಾಗದೆ, ಪ್ರಕಟವಾಗಲಿಲ್ಲ. ಆದರೂ ಲೇಖಕರು ತಮ್ಮ ಚಿಂತನೆಯ ವಿಷಯವನ್ನು ಮರೆಯದೆ ಅದರ ಬಗ್ಗೆ ಮತ್ತಷ್ಟು ಗಂಭೀರ ಅಧ್ಯಯನ ಮಾಡಿ, ತಾವು ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗ ತಾವು ಓದಿದ 'ಸೋಷಿಯಲ್ ಮತ್ತು ಕಲ್ಚರಲ್ ಅಂತ್ರೋಪಾಲಜಿ' ಶಾಸ್ತ್ರಗಳ ಬೆಳಕಿನಲ್ಲಿ ಮುಂದುವರೆಸುವ ಪ್ರಯತ್ನಮಾಡಿ, ಕಡೆಗೆ ತಮ್ಮನ್ನು 'ಮಾನವ ವಿಕಾಸ' ಸಂಬಂಧವಾದ ಈ ಕೃತಿಯು ಕನ್ನಡ ಸಾಹಿತ್ಯ ಪರಿಷತ್ತು ಮೂಲಕ ೧೯೮೮ ರಲ್ಲಿ ಪ್ರಕಟವಾಗಲು ಒಪ್ಪಿಗೆ ನೀಡಿ, ಅದಕ್ಕೊಂದು ಮುನ್ನುಡಿಯನ್ನು ೧೬ನೇ ಅಕ್ಟೋಬರ್ ೧೯೮೮ ರಂದು, ಬರೆದು ಕೊಟ್ಟರು. ಆದರೆ ವಿಧಿ ವಿಡಂಬನೆ ಎಂಬಂತೆ, ಮರುದಿವಸವೇ ಅಂದರೆ ಅಕ್ಟೋಬರ್ ೧೭ ರಂದೇ ದೈವಾಧೀನರಾದರೂ ಅವರ ಕೃತಿ ಅವರ ಮೃತ್ಯುಪತ್ರದಂತಾದದ್ದು ನಿಜವಾಗಿಯೂ ಒಂದು ದುರಂತ ವ್ಯಂಗ್ಯ

ಈ ಕೃತಿಯಲ್ಲಿ ಲೇಖಕರು ಜೀವಿಗಳ ಸೃಷ್ಟಿಯ ಪ್ರಾಚೀನತೆಯನ್ನು ವಿದ್ವಾಂಸರ ಹೇಳಿಕೆಗಳ ಮೂಲಕ ಗುರುತಿಸುತ್ತಾರೆ. ಸೃಷ್ಟಿ ಕ್ರಮದಲ್ಲಿ ಚೇತನ ಅಚೇತನಗಳೆಲ್ಲವೂ ಒಂದೇ. ಅವೆಲ್ಲಕ್ಕೂ ಒಂದೇ ತೆರನಾದ ರೀತಿಯ ನಿಸರ್ಗದಿಂದ ಪ್ರಯೋಜನವಿದೆ. ಅಸ್ತಿತ್ವಕ್ಕೆ ಬಂದವೆಲ್ಲವೂ ನಾಶ ಹೊಂದುವುದು ಅನಿವಾರ್ಯವೇ ಆದರೂ ನಾಶದ ರೀತಿಗಳು, ಕಾರಣಗಳು ಭಿನ್ನ ಭಿನ್ನವಾಗಿರುತ್ತವೆ ಅಷ್ಟೆ ಅಂತೆಯೇ ಹುಟ್ಟಿಸುವ ರೀತಿಗಳೂ ಬೇರೆ ಬೇರೆಯೇ. ಜೀವ ಸೃಷ್ಟಿಯಲ್ಲಿ ಮನುಷ್ಯನನ್ನು ಅತ್ಯಂತ ಶ್ರೇಷ್ಠ, ವಿಕಾಸದ ಪರಾಕಾಷ್ಠೆ ಎಂದು ನಂಬಲಾಗಿದೆ. ಮಾನವನಿಗೆ ಈ ಶ್ರೇಷ್ಠತೆ ಅಂಟಿದ್ದು, ಯಾವ

ಪ್ರಾಣಿಗೂ ಲಭ್ಯವಿಲ್ಲದ ವಿಚಾರಶಕ್ತಿ, ಮಾತನಾಡುವ ಶಕ್ತಿ, ತನಗೆ ಬೇಕಾದ್ದನ್ನು ತಾನು ಸೃಷ್ಟಿಸಿಕೊಳ್ಳುವ ಶಕ್ತಿ ಇತ್ಯಾದಿ ಅಂಶಗಳಿಂದ. ಆದರೆ ಲೇಖಕರು, ವಿಜ್ಞಾನಿಗಳು ತಮ್ಮ ಅನುಸಂಧಾನದಿಂದ ತಲುಪಿದ ಅಭಿಪ್ರಾಯಗಳನ್ನು ಹೀಗೆ ಪ್ರಸ್ತಾಪಿಸಿದ್ದಾರೆ. "ಸೃಷ್ಟಿಯಲ್ಲಿ ಮನುಷ್ಯ ಪ್ರಾಣಿಗೂ ಮಿಕ್ಕ ಚೇತನಾಚೇತನಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ಆದರೂ ನಮ್ಮ ದಾಸರಂತೆ ಇಂದಿನ ವಿಜ್ಞಾನಿಗಳು ಕೂಡಾ ಜೀವವು ಕೆಳಮಟ್ಟದಿಂದ ವಿವರ್ತಗೊಳ್ಳುತ್ತಾ ಮನುಷ್ಯ ಪ್ರಾಣಿಯವರೆಗೆ 'ಪ್ರಗತಿ'ಯನ್ನು ಹೊಂದಿದೆ ಎನ್ನುತ್ತಾರೆ."- ಎಂದು ಹೇಳುವುದರ ಅಭಿಪ್ರಾಯದಲ್ಲಿ ಮಾನವ ಜೀವ ವಿಕಾಸದ ಉತ್ಕರ್ಷದ ಪರಾಕಾಷ್ಠೆಯ ಹಂತ ಎಂಬುದು ಸತ್ಯ. ಮನುಷ್ಯ ಪ್ರಾಣಿ ೧೦-೪೦ ಲಕ್ಷ ವರ್ಷಗಳ ಮೊದಲು ಅಸ್ತಿತ್ವಕ್ಕೆ ಬಂದಿದ್ದರೂ ಬುದ್ಧಿ ವಿಕಾಸ ಮಾತ್ರ ಕೇವಲ ೩೫ ಸಾವಿರ ವರ್ಷಗಳಿಂದೀಚೆಗೆ ಅಷ್ಟೆ !

ಮಾನವ ಪ್ರಾಣಿ ಅಸ್ತಿತ್ವಕ್ಕೆ ಬಂದ ಆರಂಭದಲ್ಲಿ ಬೇಟೆಯೆ ಜೀವನಾಧಾರವಾಗಿದ್ದು, ಗುಂಪು ಜೀವನ ನಡೆಸುತ್ತ ಬಂದವನು ಗುಂಪಿಗೆ ರಕ್ಷಣೆಗೆ 'ನಾಯಕತ್ವ'ದಿಂದ ಪ್ರಾರಂಭಿಸಿ ಕುಟುಂಬ ಸಮಾಜಗಳ ರಚನೆಗಳಿಗೆ ಮುಂದಾದ. ಅಲೆಮಾರಿ ಬದುಕಿನಿಂದ ಬೇಟೆಯಿಂದ ಜೀವಿಸುತ್ತಿದ್ದು, ನಂತರ ಒಂದೆಡೆ ನೆಲೆನಿಂತು ಕೃಷಿ ವ್ಯವಸ್ಥೆಯನ್ನು ರೂಢಿಸಿಕೊಂಡ. ಹಸಿವು, ಮೈಥುನಗಳೇ ಮೊದಲ ಆದ್ಯತೆಗಳಾದವು. ಆತ್ಮಪೋಷಣೆ, ರತಿ ಸುಖಗಳು ಅನಿವಾರ್ಯ ಅಗತ್ಯಗಳಾದವು. ಅಪ್ರಜ್ಞಾಪೂರ್ವಕವಾಗಿ ಮತ್ತು ಆಕಸ್ಮಿಕವಾಗಿ ಬಿತ್ತಿ, ಬೆಳೆದು ತಿನ್ನುವ ಪ್ರಕ್ರಿಯೆ ಒಂದು ಅದ್ಭುತ ಕ್ರಾಂತಿಯೆಂದೇ ಲೇಖಕರು ಭಾವಿಸುತ್ತಾರೆ. ಮುಂದೆ ಮುಂದೆ ಬೌದ್ಧಿಕ ಬೆಳವಣಿಗೆ ಬದುಕಿನ ಸುಧಾರಣೆಗಳ ಜೊತೆಗೆ ಆತ್ಮರಕ್ಷಣೆಯ ಅನಿವಾರ್ಯತೆಯ ಅರಿವು, ಅಸ್ತಿತ್ವವನ್ನು ಬಲಪಡಿಸಿಕೊಳ್ಳಲು, ಕೃಷಿ ಭೂಮಿ, ಕುಟುಂಬ ಸದಸ್ಯರ ರಕ್ಷಣೆಗಾಗಿ ತನ್ನದೇ ಸಹಮಾನವರೊಂದಿಗೆ ಸಂಘರ್ಷ ಹೋರಾಟಗಳು, ಗ್ರಾಮಗಳು, ರಾಜ್ಯಗಳು ಯಾ ರಾಷ್ಟ್ರಗಳು ಇವುಗಳ ರಚನೆಗೆ ದಾರಿಯಾದುದೇ ಅಲ್ಲದೆ ಅವುಗಳನ್ನು ಭದ್ರಪಡಿಸಿಕೊಳ್ಳಲು, ಕ್ರೌರ್ಯ ದ್ವೇಷಗಳು, ದುರ್ಬಲರ ಮೇಲಿನ ದೌರ್ಜನ್ಯಗಳು, ಆಕ್ರಮಣಗಳು ಅನಿವಾರ್ಯವೆಂಬಂತೆ ಹುಟ್ಟಿಕೊಂಡು 'ಕುಟುಂಬ' ವ್ಯವಸ್ಥೆಯ ಸ್ವರೂಪವನ್ನು ವಿವರಿಸುತ್ತಾ, ಅದರಲ್ಲಿ ಹೆಣ್ಣು-ಗಂಡಿನ ಪಾತ್ರ, ಮದುವೆ ವ್ಯವಸ್ಥೆ ರೂಢಿಗೆ ಬರಲು ಕಾರಣ ವಿವರಿಸುವುದರೊಂದಿಗೆ "ಜೀವನ ಮತ್ತು ಉಪಜೀವನಗಳ ಅಗತ್ಯಗಳ ನಿರಾತಂಕ ಪೂರೈಕೆಗೆ ಈ ಪ್ರಪ್ರಥಮ ಸಹಕಾರ ಸಂಘವು (ಕುಟುಂಬ) ಅತ್ಯಂತ ಅನುಕೂಲವಾದ ಸಾಧನವಾಯಿತು" ಎಂದು ಅಭಿಪ್ರಾಯ ಪಡುತ್ತಾರೆ.

ಈ ಕುಟುಂಬ ಪದ್ಧತಿಯ ಹಿನ್ನೆಲೆಯಿಂದಲೇ ಸಮಾಜದಲ್ಲಿ ಗಂಡು-ಹೆಣ್ಣಿನ ನೆಲೆಗಳು ನಿರ್ಧಾರವಾಯಿತೆಂಬುದನ್ನು ಗುರುತಿಸುತ್ತಾರೆ. ಅಂದಿನಿಂದಲೂ ಹೆಣ್ಣು ಗಂಡಿನ ಅಧೀನಳಾಗಿಯೇ ಬದುಕುತ್ತಿದ್ದಾಳೆ. ಹೀಗೆ ಹೆಣ್ಣು ಅವನಿಗೆ ಅಧೀನಳಾಗಿ ಬದುಕಲು ಇದ್ದ ಕಾರಣಗಳನ್ನು ವಿವರಿಸುತ್ತಾರೆ. ಅಲ್ಲದೆ, ಮೇಲುನೋಟಕ್ಕೆ ಹೆಣ್ಣನ್ನು'ಮಾತೃದೇವೋ ಭವ', 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾಃ'

ಎಂದು ದೊಡ್ಡದಾಗಿ ಸ್ತುತಿಸುತ್ತಿದ್ದರೂ, ವಾಸ್ತವದಲ್ಲಿ ಹೆಣ್ಣಿಗೆ ಯಾವುದೇ ಸುಖ, ಸವಲತ್ತು, ಸ್ವಾತಂತ್ರ್ಯವಿಲ್ಲದ್ದುದನ್ನು ಪ್ರಸ್ತಾಪಿಸಿದ್ದಾರೆ. ಪುರುಷನ ಭೋಗ ವಸ್ತುವಾಗಿ, ಹಗಲಿರುಳೂ ದುಡಿವ ಯಂತ್ರವಾಗಿ, ಆರ್ಥಿಕ ಪರಾವಲಂಬಿಯಾಗಿ, ವ್ಯಕ್ತಿತ್ವವೇ ಇಲ್ಲದ ಅಸಹಾಯಕ ಸ್ಥಿತಿಯಲ್ಲಿ ಜೀವಿಸುವ ಉಪೇಕ್ಷಿತಳಾಗಿ ಬಾಳುವ ದೈನ್ಯ ಸ್ಥಿತಿಯನ್ನು ವಿವರಿಸಿ, ಇಂದಿನ ಸ್ತ್ರೀ ಹೋರಾಟಗಳ ಕಡೆ ಇದೇ ಸಂದರ್ಭದಲ್ಲಿ ಗಮನ ಸೆಳೆಯುತ್ತಾರೆ. ಹೆಣ್ಣಿಗೆ ಸ್ವಾತಂತ್ರ್ಯ ಬೇಕು. ಹೆಣ್ಣಿನ ಸ್ಥಾನದಲ್ಲಿ ಬದಲಾವಣೆ ಬೇಕು. ಆಕೆಗೂ ಶಿಕ್ಷಣದ ಅವಕಾಶ ಬೇಕು ಎಂದೆಲ್ಲ ಹೇಳುವ ಲೇಖಕರು "ಸ್ತ್ರೀಯರು ಗಂಡಸರಿಗೆ ಸರಿಸಮಾನರು, ಅವರಿಗೂ ಪೂರ್ತಿ ಸ್ವಾತಂತ್ರ್ಯವಿರಬೇಕು ಎಂಬ ಮಾತನ್ನು ನಾವು ಒಪ್ಪುವುದು ಅಗತ್ಯವಿಲ್ಲ... ಇಂದು ತನ್ನ ಸ್ವಾತಂತ್ರ್ಯಕ್ಕಾಗಿ ಗಂಡಸಿನ ವಿರುದ್ಧ ಹೋರಾಡಿದ ಹೆಂಗಸಿಗೆ ಯಶಸ್ಸು ಸಿಕ್ಕಿತೆಂದರೆ, ಆಕೆ ಗಂಡಸಿಗೆ ಯಾವ ದೃಷ್ಟಿಯಿಂದಲೂ ನೆರವಾಗಲಿಕ್ಕಿಲ್ಲ. ಒಬ್ಬನೊಡನೆ ಮನೆಮಾಡಿಕೊಂಡು ಮಕ್ಕಳನ್ನು ಹೆತ್ತು ಮನೆಯನ್ನೂ ಮಕ್ಕಳನ್ನೂ ನೋಡಿಕೊಳ್ಳಲೂ ಒಪ್ಪಲಿಕ್ಕಿಲ್ಲ. ಗಂಡಸಿನಂತೆ ಆಕೆಯೂ ಲೈಂಗಿಕ ವ್ಯವಹಾರದಲ್ಲಿ ಸ್ವಚ್ಛಂದ ವೃತ್ತಿಯವಳಾಗಬಹುದು ಮುಂತಾಗಿ ಕೆಲವರಿಗೆ ಸಮಾಜ ಸ್ವಾಸ್ಥ್ಯದ ದೃಷ್ಟಿಯಿಂದ ಭೀತಿಯುಂಟಾಗಬಹುದಾದರೆ ಅದು ಅಸಹಜವಲ್ಲ. ಇಂತಹವರ ಭೀತಿಗೆ ಪೋಷಕವಾಗಿ ಪ್ರಾರಂಭದಲ್ಲಿ, ಸಂಧಿಕಾಲದಲ್ಲಿ ಅಲ್ಲಲ್ಲಿ ಕೆಲವು ದೃಷ್ಟಾಂತಗಳೂ ದೊರೆಯಬಹುದು. ಆದುದರಿಂದ ಮುಂಚಿತವಾಗಿಯೇ ಸ್ತ್ರೀ ಸ್ವಾತಂತ್ರ್ಯದಿಂದ ಸಮಾಜದಲ್ಲಿ ಯಾವ ಘಾತಕ ಪ್ರವೃತ್ತಿಯೂ ತಲೆ ಎತ್ತದಂತೆ ನೋಡಿಕೊಳ್ಳುವುದಗತ್ಯವಾದ್ದರಿಂದ ಇಂದು ನಾವೆಲ್ಲರೂ ಈ ಪ್ರಶ್ನೆಯನ್ನು, ಭಾವನೆಯನ್ನು ಬಯಲಿಗಿಟ್ಟು ವ್ಯಾವಹಾರಿಕ ದೃಷ್ಟಿಯಿಂದ ಯೋಚಿಸುವುದು ಅಗತ್ಯವಾಗಿದೆ ಎಂದು ಹೇಳುವ ಮಾತುಗಳಲ್ಲಿ ಸ್ವಲ್ಪ ಮಟ್ಟಿಗೆ ಸ್ತ್ರೀ ಸ್ವಾತಂತ್ರ್ಯ ವಿರೋಧಿ ನಿಲುವನ್ನು ಗುರುತಿಸುವುದು ಸಾಧ್ಯ. ಈ ಕೃತಿಯ ಉದ್ದಕ್ಕೂ ಮಾನವನ ಪ್ರಗತಿಯ ವಿವಿಧ ಮುಖಗಳ ಅಂದರೆ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಬೌದ್ಧಿಕ ಪ್ರಗತಿಯ ಪರಿಣಾಮಗಳ ಬಗ್ಗೆ ಸಂಪೂರ್ಣವಾದ ಆಶಾದಾಯಕ ಭರವಸೆಯನ್ನಾಗಲೀ, ಪ್ರೋತ್ಸಾಹದಾಯಕ ನಿಲುವನ್ನಾಗಲೀ ಕಾಣಲು ಸಾಧ್ಯವಿಲ್ಲ. ಅನಾಗರಿಕ ಆದಿಮಾನವನಿಂದ ಇಂದಿನ ಅತ್ಯಂತ ನಾಗರಿಕ ಮಾನವನ ಪ್ರಗತಿಯ ಹೆಜ್ಜೆಗಳ ಅಡಿಯಲ್ಲಿ ಭೂ ಕುಸಿತದ ಅಪಾಯವನ್ನು ಮನಗಾಣುತ್ತಾ ಮಾನವ ಜೀವನ ವಿಕಾಸದ ಹಾದಿಯಲ್ಲಿ ಅಸ್ತಿತ್ವಕ್ಕೆ ಬಂದ, ವ್ಯಷ್ಠಿ, ಸಮಷ್ಠಿ, ವಿಕಾಸಗಳ ರೂಪದಲ್ಲಿನ ಕುಟುಂಬ, ಗ್ರಾಮ, ರಾಜ್ಯ, ರಾಷ್ಟ್ರ ವ್ಯವಸ್ಥೆ, ಆಡಳಿತ ಕ್ರಮ, ರಾಜ್ಯ ವಿಸ್ತರಣೆಗಾಗಿ ಯುದ್ಧಗಳು, ಮಿತ್ರ-ಶತ್ರು ವರ್ಗಗಳ ಸೃಷ್ಟಿ ; ಆರ್ಥಿಕ ವಿಕಾಸದ ಬಗ್ಗೆ ಚರ್ಚಿಸುವಾಗ ಬೇಟೆಯ ಹಂತದ ಕೃಷಿ, ವಾಣಿಜ್ಯ, ಉತ್ಪಾದನೆ ಮತ್ತು ಇವತ್ತಿನ ಯಂತ್ರಗಳ ಬಳಕೆಯವರೆಗೆ ಸಾಗಿಬಂದ ಕ್ರಮ; ದೈಹಿಕ ಶ್ರಮದ ಎಡೆಯಲ್ಲಿ ಯಂತ್ರಗಳ ಬಳಕೆ ಇದರಿಂದಾಗಿ ಸೃಷ್ಟಿಯಾಗುವ ನಿರುದ್ಯೋಗ ಸಮಸ್ಯೆ, ಆಲಸ್ಯ ಇತ್ಯಾದಿಗಳು ಸೃಷ್ಟಿಯಾಗುತ್ತವೆ. ದೇಹಕ್ಕೆ ಶ್ರಮ ಬೇಕು. ಅವಯವಗಳಿಗೆ ಕೆಲಸ ಕೊಡಬೇಕು. ಆದರೆ ನಗರಗಳ ವ್ಯಾಪಕ ಬೆಳವಣಿಗೆ, ಯಂತ್ರಗಳ ಅತಿಯಾದ ಬಳಕೆಯಿಂದ ಮಾನವನಲ್ಲಿ

ವ್ಯಕ್ತಿತ್ವವೇ ಕಳೆದು ಹೋಗುತ್ತಿದ್ದ ಮಾನವ ಸ್ವಾರ್ಥಿಯಾಗುತ್ತಿದ್ದಾನೆ. ತಾನಷ್ಟೇ ಸುಖವಾಗಿದ್ದರೆ ಸಾಕೆಂಬ ಕಾರಣಕ್ಕಾಗಿ, ಒಬ್ಬರ ಮುಖವನ್ನೊಬ್ಬರು ನೋಡಿದಂತಾಗಿ, ಏಕಾಕಿತನ ಸೃಷ್ಟಿಯಾಗುತ್ತಾ, ಪರಿಣಾಮವಾಗಿ ಅಸಹಾಯಕತೆಯ ಭಾವನೆಗೆ ಒಳಗಾಗುತ್ತಿದ್ದಾನೆ. ಏಕಾಕಿತನದ ಅಸಹಾಯಕತೆ ಅಲ್ಲದೆ ಇನ್ನೂ ಅನೇಕ ಅನಿಷ್ಟಗಳನ್ನು ಎದುರಿಸಬೇಕಾಗುತ್ತದೆ ಎನ್ನುವುದು ಲೇಖಕರ ಅಭಿಪ್ರಾಯ. ಮುಂದೆ ಅವರು ನಗರಗಳಿಂದ ಆಗುವ ಅನಾಹುತಗಳ ಸ್ವರೂಪವನ್ನು ಹೀಗೆ ವಿವರಿಸುತ್ತಾ "ನಗರಗಳು ಬೆಳೆಯುವ ರೀತಿಯನ್ನು ನೋಡಿದರೆ ಇಂದಲ್ಲ ನಾಳೆ ವೈತರಣಿಯಿಂದ ಸುತ್ತುಗಟ್ಟಿದ ನರಕವಾಗುವುದು ಪ್ರತಿಯೊಂದು ನಗರ. ಆ ರೀತಿ ನಗರದ ಸುತ್ತಲೂ ಕೊಳಚೆ ಪ್ರದೇಶಗಳು ಬೆಳೆಯುವುದು, ಗಣಿಯಲ್ಲಿ ಹುಳುವಿನಂತೆ, ಕೊಳಚೆಯಲ್ಲಿ ಸ್ವಚ್ಛಂದವಾಗಿ ಇರಬಲ್ಲ ಪ್ರವೃತ್ತಿಯ ಮನುಷ್ಯರು ಇರುವವರೆಗೆ ಕೊಳಚೆ ನಿರ್ಮೂಲನವು ಸ್ಕೂಲ್-ಕಾಲೇಜ್ ವಿದ್ಯಾರ್ಥಿಗಳ ಚರ್ಚೆಯ ವಿಷಯವಾಗಬಲ್ಲದಲ್ಲದೆ ಸಮಾಜವಾಗಲಿ, ಸರಕಾರವಾಗಲಿ ಬಿಡಿಸಲೇಬೇಕಾದ ಸಮಸ್ಯೆಯಾಗುವುದಿಲ್ಲ" ಎಂಬ ಮಾತುಗಳು ಇಂದಿನ ನಮ್ಮೆಲ್ಲರ ಅನುಭವಕ್ಕೆ ಬಂದಿರುವ ಸತ್ಯ ಸಂಗತಿಯಾಗಿದೆ.

ಅತಿಯಾದ ಮಾನವ ಪ್ರಗತಿ, ಸಮಾಜ, ರಾಷ್ಟ್ರಗಳ ನಿರ್ಮಾಣ ಅಗತ್ಯಕ್ಕೂ ಹೆಚ್ಚಾದ, ನಿಯಂತ್ರಿಸಲಾಗದ ಜನಸಂಖ್ಯೆ ಹಳ್ಳಿಗಳಿಂದ ನಗರಗಳೆಡೆಗೆ ನುಗ್ಗಿ ಬರುತ್ತಿರುವ ಜನ ಸಮೂಹಗಳು, ಅನೇಕ ಸಮಸ್ಯೆಗಳನ್ನು ಹುಟ್ಟು ಹಾಕುತ್ತಿವೆ. ಸ್ತ್ರೀ ಪುರುಷರಲ್ಲಿ ಹಿಂದಿನದಕ್ಕಿಂತ ಭಿನ್ನವಾದ ಧೋರಣೆಗಳು, ಮನೋಧರ್ಮಗಳು, ಬೌದ್ಧಿಕತೆಯ ತಾರತಮ್ಯಗಳು ಕುಟುಂಬ ವ್ಯವಸ್ಥೆಯ ವಿಘಟನೆಗೆ ದಾರಿಯಾಗುತ್ತಿವೆ. ಹೆಣ್ಣು ಕುಟುಂಬದ ಕಣ್ಣು ಎನ್ನುವ ಹಿಂದಿನವರ ಮಾತು ಇಂದು ಪ್ರಶ್ನಾರ್ಹವಾಗಿದೆ. ಇಂಥ ಸಂದರ್ಭದಲ್ಲಿ ಕುಟುಂಬ ಪದ್ಧತಿಯ ಮೂಲ ತತ್ವಗಳನ್ನು ಬದಲಾಯಿಸುವುದೊಂದೇ ಸರಿಯದ ದಾರಿ ಎನ್ನುತ್ತಾರೆ ಲೇಖಕರು. ಮಾನವ ವಿಕಾಸದ ಮುಂದುವರಿಕೆಯಲ್ಲಿ, ಅವನ ಬೌದ್ಧಿಕ ಸಾಮರ್ಥ್ಯದಿಂದಾಗಿ, ಅನೇಕ ಪರಿಕಲ್ಪನೆಗಳು ಹುಟ್ಟುಕೊಂಡ ಸುಖಿ ಬದುಕಿಗಾಗಿ, ಸುಭದ್ರ ನೆಲೆಗಾಗಿ, ಆತ್ಮರಕ್ಷಣೆ, ಕುಟುಂಬ, ಸಮಾಜ, ರಾಷ್ಟ್ರ ರಕ್ಷಣೆಗಾಗಿ ಏನೆಲ್ಲ ಸಾಧನಗಳನ್ನು ಸಾಮಗ್ರಿಗಳನ್ನು ಸೃಷ್ಟಿಸಿಕೊಂಡ, ನಿಸರ್ಗದ ಕೂಸಾಗಿ ಅಸ್ತಿತ್ವಕ್ಕೆ ಬಂದ, ನಿಸರ್ಗದ ಸತ್ವಗಳನ್ನು ಹೀರಿಕೊಂಡು ಬೆಳೆದ ಮಾನವ, ಕಾಪಾಡುವ ತಾಯಿಯ ಕೊರಳನ್ನೇ ಹಿಚುಕುವಂತಾಗಿದ್ದಾನೆ ಎಂಬುದು ಲೇಖಕರ ಗ್ರಹಿಕೆ. ಆದರೆ ಮಾನವ ನಿಸರ್ಗದ ಮೇಲೆ ದಿಗ್ವಿಜಯವನ್ನು ಸಾಧಿಸಿದೆನೆಂಬ ಭ್ರಮೆಯಲ್ಲಿದ್ದಾನೆ. ಅವನಿಗೆ ಸಾವು, ಪ್ರಳಯ ಇತ್ಯಾದಿಗಳ ಭೀತಿಯಲ್ಲಿ ಆಶಾಭಾವನೆಯೊಂದಿಗೆ, ಸಾಹಸದೊಂದಿಗೆ, ನೈಸರ್ಗಿಕ ವಿಘ್ನಗಳನ್ನು, ಮಾನವ ನಿರ್ಮಿತ ವಿಘ್ನಗಳನ್ನು, ತಂತ್ರಜ್ಞಾನ, ವಿಜ್ಞಾನಗಳ ಮೂಲಕ ಗೆಲ್ಲುತ್ತಾ ಸಾಗಿದ್ದಾನೆ ಎನ್ನುವುದು ನಿಜವಾದರೂ ಮಾನವ ತನ್ನ ಅತಿಯಾದ ಬುದ್ಧಿವಂತಿಕೆಯಿಂದಾಗಿ ನಿಸರ್ಗವನ್ನು ತನ್ನ ಅಗತ್ಯಗಳಿಗೂ ಮೀರಿದಂತೆ ಅಧೀನಗೊಳಿಸುವ ಪ್ರಯತ್ನದಲ್ಲಿ ತನ್ನ ವಿನಾಶವನ್ನು ತಾನೇ ಸ್ವಾಗಿತಿಸುತ್ತಿದ್ದಾನೆ ಎನ್ನುವುದು ಲೇಖಕರ ಭವಿಷ್ಯದ ನುಡಿಯಾಗಿದೆ.

Nature is beautiful ಎಂಬುದು ಎಲ್ಲ ನಿಸರ್ಗ ಪ್ರೇಮಿಗಳ, ವಾಸ್ತವದ ಅರಿವುಳ್ಳವರ ಅಭಿಪ್ರಾಯವಾಗಿದೆ. ಭೌತಿಕ ಪ್ರಗತಿಯ ರಭಸದ ಓಟ, ನೈಸರ್ಗಿಕ ಪರಿಸರಕ್ಕೆ ಧಕ್ಕೆಯುಂಟುಮಾಡಿದೆ. ಸ್ವಾರ್ಥಕ್ಕಾಗಿ, ಲಾಭಕ್ಕಾಗಿ ಪರಿಸರ ಕಾಳಜಿ ಇಲ್ಲದೆ ಮುಂದಾಗುವ ಅನಾಹುತಗಳ ಕಲ್ಪನೆಯಿಲ್ಲದೆ ಅರಣ್ಯನಾಶಕ್ಕಾಗಿ ಹಾತೊರೆಯುತ್ತಿದ್ದಾನೆ. ಕ್ಷಣದ ಲಾಭ, ಕ್ಷಣದ ಸುಖ ಅವನನ್ನು ವಿನಾಶದ ಅಧಃಪಾತಾಳಕ್ಕೆ ತಳ್ಳುತ್ತಿದೆಯೆಂಬುದರ ಅರಿವಿಲ್ಲದೆ ಪ್ರಪಾತದತ್ತ ಹೆಜ್ಜೆಯಿಡುತ್ತಿದ್ದಾನೆ. ಯಾಕೆಂದರೆ, ನಿಸರ್ಗ ಮಾನವನ ಅಧೀನಕ್ಕೆ ಒಳಪಡುತ್ತಿರುವಂತೆ ತೋರುತ್ತಿದೆಯೇ ಹೊರತು, ತನ್ನ ನಿಗೂಢತೆಗಳನ್ನು ಇನ್ನೂ ಬಿಟ್ಟು ಕೊಟ್ಟಿಲ್ಲ ಎನ್ನುವುದು ಲೇಖಕರ ನಿಲುವು. ಮನುಷ್ಯ ಒಂದು ಕಡೆ ಪ್ರಗತಿಯನ್ನು ತೀವ್ರ ಗತಿಯಲ್ಲಿ ಸಾಗಿಸುತ್ತಾ ಹೋಗಿದ್ದಾನೆ. ಮತ್ತೊಂದು ಕಡೆ ಅದೇ ವೇಗದಲ್ಲಿ ಕ್ರೌರ್ಯವನ್ನು ಹೆಚ್ಚಿಸಿಕೊಳ್ಳುತ್ತಿದ್ದಾನೆ. ಒಂದು ರೀತಿಯಲ್ಲಿ ಮತ್ತೊಂದರ ವಿನಾಶದಲ್ಲಿಯೇ ಸಂತೋಷವನ್ನು ಅನುಭವಿಸಬೇಕೆನ್ನುವ ಮಾನವನ ಈ ಬಗೆಯ ಕ್ರೌರ್ಯಕ್ಕೆ ಲೇಖಕರು ಎರಡು ಕಾರಣಗಳನ್ನು ಗುರುತಿಸುತ್ತಾರೆ. ಒಂದು ಅತಿಯಾದ ಬುದ್ಧಿ, ಮತ್ತೊಂದು 'ಕಾಮ'. ಕಾಮ ಮಾನವ ಬದುಕಿನಲ್ಲಿ ಅನಿವಾರ್ಯವೇ ಆದ ಶಕ್ತಿಯಾಗಿದೆ. ಅನಿವಾರ್ಯವಾದಷ್ಟೇ ಅದಮ್ಯವೂ ಆಗಿದೆ. ಆದರೆ ಈ ಕಾಮ ಯಾವುದೇ ನೈತಿಕ ಚೌಕಟ್ಟು ಅಥವಾ ನಿರ್ಬಂಧಕ್ಕೆ ಒಳಗಾಗಿದ್ದಾಗ ಅನ್ಯರ ಸಂಕಷ್ಟಗಳಿಗೆ ಕಾರಣವಾಗುತ್ತದೆ, ಸಾವು, ದುರಂತಗಳತ್ತಲೂ ಚಾಚುತ್ತದೆ. ಧರ್ಮ, ನೀತಿ, ಕಾಯಿದೆಗಳ ಮೂಲಕ ನಿಯಂತ್ರಣದ ಪ್ರಯತ್ನಕ್ಕೆ ಅವಕಾಶವಿದ್ದರೂ ನಿಯಂತ್ರಣ ಅಸಾಧ್ಯವಾಗಿದೆ. ಕಾಮ, ರತಿ ಸುಖಗಳು ಕೇವಲ ಮಾನವ ಪ್ರಾಣಿಗೆ ಮಾತ್ರವೇ ಲಭ್ಯ ಸ್ಥಿತಿಯಲ್ಲ. ಎಲ್ಲ ಪ್ರಾಣಿಗಳಲ್ಲೂ ಕಾಮ ಅಥವಾ ಲೈಂಗಿಕ ಆಕರ್ಷಣೆ ನೈಸರ್ಗಿಕ ಪ್ರವೃತ್ತಿಯಾಗಿದೆ. ಆದರೆ ಪ್ರಾಣಿಗಳಲ್ಲಿ ಕಾಮ ಋತು ಸಂಬದ್ಧವಾಗಿದ್ದರೆ ಮಾನವನಲ್ಲಿ ವಿಶೃಂಖಲ ಅಥವಾ ಸ್ವೇಚ್ಛೆಯಾಗಿದೆ. ಅದರಲ್ಲಿಯೂ ಲೈಂಗಿಕ ವ್ಯವಹಾರದಲ್ಲಿ ಗಂಡಿನದೇ ನಿರ್ಣಾಯಕ ಪಾತ್ರವಾದ್ದರಿಂದ ಅವನದೇ ಮೇಲು ಆದುದರಿಂದ ಹೆಣ್ಣು ಅಧೀನ ಸ್ಥಿತಿಗೆ ಒಳಪಡಬೇಕಾಯಿತು ಎನ್ನುವುದು ಲೇಖಕರ ತರ್ಕಬದ್ಧ ಅಭಿಪ್ರಾಯ. ಹೆಣ್ಣಿನ ಒಡೆತನದ ಜೊತೆ ಜೊತೆಗೆ ನೆಲದ ಒಡೆತನವನ್ನು ದಕ್ಕಿಸಿಕೊಳ್ಳುವ ಪ್ರಯತ್ನ ಈ ಎರಡೂ ಒಡೆತನಗಳ ಗಳಿಕೆಗಾಗಿಯೇ ಪರಸ್ಪರ ಹೊಡೆದಾಟ, ಯುದ್ಧ, ಇಡೀ ಮನುಕುಲದ ಇತಿಹಾಸದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದ ಕ್ರಮವೆಂದರೆ ಹೆಣ್ಣಿಗಾಗಿ, ಮಣ್ಣಿಗಾಗಿ ಭಯಂಕರ ಸಮರಗಳು – ಸಾವು ನೋವುಗಳು ಗೆಲುವು–ಸಂಭ್ರಮಗಳು ಇವೇ ಸಾಮಾನ್ಯ ಸಂಗತಿಗಳಾಗಿದ್ದವು.

ಮಾನವನ ವಿಕಾಸದ ಭಾಗವಾಗಿ ಅವನಲ್ಲಿ ಮೂಡಿದ ಅಧಿಕಾರದ ಆಕಾಂಕ್ಷೆ. ಅಧಿಕಾರವನ್ನು ಬಲಪ್ರಯೋಗ, ದಮನ ಶಕ್ತಿಗಳಿಂದ ಗಳಿಸಿಕೊಳ್ಳುವ ಪ್ರಯತ್ನ ಬಲಿಷ್ಠರನ್ನು ಪ್ರತಿಬಲದಿಂದ ಹತೋಟಿಯಲ್ಲಿ ಇರಿಸಿಕೊಳ್ಳಲು ಸಾಧ್ಯವಿಲ್ಲದಿದ್ದಾಗ, ಅತಿ ಮಾನವ ಶಕ್ತಿಗಳ ಮೊರೆಗೆ ಹೋಗಬೇಕಾಗಿ ಬಂದುದರಿಂದ, ದೇವರು, ಧರ್ಮ, ಸ್ವರ್ಗ, ನರಕ ಇತ್ಯಾದಿ ಪರಿಕಲ್ಪನೆಗಳು ಅಸ್ತಿತ್ವಕ್ಕೆ ಬಂದವು. ಪಾಪ–ಪುಣ್ಯಗಳ ವಿಚಾರಗಳು ಹುಟ್ಟಿಕೊಂಡವು.

ಐಹಿಕ ಸುರಕ್ಷತತೆಗೆ ಕುಟುಂಬ ವ್ಯವಸ್ಥೆ ಹುಟ್ಟಿಕೊಂಡರೆ, ಪಾರಲೌಕಿಕ ಕಾರಣಗಳಿಂದಾಗಿ ಧರ್ಮದ ಹೆಸರಿನಲ್ಲಿ, ಸಮಾಜ ವ್ಯವಸ್ಥೆಯ ಭದ್ರಗತೆಗಾಗಿ ದೇವನ ಪರವಾದ 'ಬ್ರಾಹ್ಮಣ' ಹುಟ್ಟಿಕೊಂಡು, ಪುರೋಹಿತಶಾಹಿ ವ್ಯವಸ್ಥೆ ಚಾಲನೆಗೆ ಬಂದಿತು. ಹೀಗೆ ಮಾನವ ವಿಕಾಸದ ವ್ಯಾಪ್ತಿಯೊಳಗೆ ಬರುವ ಹುಟ್ಟು, ದೇವರು, ಧರ್ಮ, ಸ್ವರ್ಗ, ನರಕ ಇತ್ಯಾದಿ ಪರಿಕಲ್ಪನೆಗಳಲ್ಲದೆ ಭೌತಿಕ ವಲಯಕ್ಕೆ ಸೇರುವ ಅವನ ಜೀವನ ವಿಧಾನಗಳಲ್ಲಿನ ಬದಲಾವಣೆಗಳು (ಆಹಾರ, ವೇಷಭೂಷ, ವಸತಿ, ಶಿಕ್ಷಣ, ಉದ್ಯೋಗ, ಉತ್ಪಾದನೆ, ಅಧಿಕಾರ ವ್ಯವಸ್ಥೆಗಳು, ಅನ್ವೇಷಣೆಗಳು, ಶೋಧಗಳು) ಸುಖೀಜೀವನಕ್ಕೆ ಬೇಕಾದ ಸಾಧನ ಸೌಲಭ್ಯಗಳು, ನೂತನ ವಿಜ್ಞಾನ ತಂತ್ರಜ್ಞಾನೋತ್ಪನ್ನಗಳು, ಅವುಗಳ ಪ್ರಯೋಜನ ಅಲ್ಲದೆ ಅವುಗಳಿಂದಲೇ ಸಂಭವಿಸಬಹುದಾದ ಅವಘಡಗಳು ಇತ್ಯಾದಿಗಳೆಲ್ಲವನ್ನೂ ಶ್ರೀರಂಗರು, ವರ್ತಮಾನದ ಪರಿಸರದೊಂದಿಗೆ ಹಿಂದಿನ ಪರಿಸರದ ವಿವರಣೆಯೊಂದಿಗೆ ತೌಲನಿಕವಾಗಿ ವಿಶ್ಲೇಷಿಸಿ, ಒಂದು ನಿಲುವನ್ನು ತಲುಪುತ್ತಾರೆ. ಮಾನವನ ಈ ಪ್ರಗತಿಯ ಓಟದ ಹಿಂದಿನ ಪ್ರೇರಣೆಯೆಂದರೆ 'ಸುಖ'ದ ಬಯಕೆ. ಸುಖ ಯಾವ ರೀತಿಯಲ್ಲಿ ದಕ್ಕಿದರೂ ಸರಿಯೇ, ಅದನ್ನು ಸಾಧಿಸಿಕೊಳ್ಳಬೇಕೆಂಬ ತುಡಿತ! ಆದರೆ 'ಸುಖ' ಎಂಬುದರ ನಿಜವಾದ ಅರ್ಥವನ್ನು ಅವನು ತಿಳಿದಿದ್ದಾನೆಯೇ ? ಎಂಬುದು ಲೇಖಕರ ಪ್ರಶ್ನೆ. 'ಸುಖ' ಎನ್ನುವುದು ಒಂದು ಮನಃಸ್ಥಿತಿ. ಆದ್ದರಿಂದ ಅದು ಏಕರೂಪಿಯಲ್ಲ. ಒಬ್ಬೊಬ್ಬರ ಗ್ರಹಿಕೆಯಲ್ಲಿ ಸುಖವೆಂಬುದು ಒಂದೊಂದು ತೆರವಾಗಿರುತ್ತದೆ. ಅವನು ಸುಖವೆಂಬುದನ್ನು ಸರಿಯಾಗಿ ಗ್ರಹಿಸಲಾರ. ತಾನು ಬಹಳ ಬುದ್ಧಿವಂತನೆಂಬ ಹುಂಬು ನಂಬಿಕೆಯಲ್ಲಿದ್ದಾನೆ. ಶ್ರೀರಂಗರು ಮಾನವನನ್ನು ಇನ್ನೂ, ಅಂದರೆ ಮಿಕ್ಕಪ್ರಾಣಿಗಳಿಗಿಂತ ಬೇರೆಯಾಗಿ ಬುದ್ಧಿಯನ್ನು ಬೆಳೆಸಿಕೊಂಡಿದ್ದರೂ, ಭಾವನಾಜೀವಿಯಾಗಿಯೇ ಇದ್ದಾನೆ; ಅವನ ಹಿರಿಯರು ಅವನ ಬುದ್ಧಿ ಬೆಳೆಯದಂತೆ ನೋಡಿಕೊಂಡು ಅವನ ಭಾವನೆಗಳನ್ನು ಕೆರಳಿಸಿ ಅವನನ್ನು ಇನ್ನೂ ಪ್ರಾಣಿಗಳ ಅವಸ್ಥೆಯಲ್ಲಿಯೇ ಇಟ್ಟಿದ್ದಾರೆ. ಆದ್ದರಿಂದ ಇಂದಿನ ಮಾನವನು ಮುಂಚಿನವನಿಗಿಂತ ಹೆಚ್ಚಿನ ಪ್ರಗತಿಯ ಸ್ಥಿತಿಯಲ್ಲಿ ಇದ್ದಾನೆ ಎಂದು ಹೇಳಲಾಗದು. ಭಾವನೆಗಳನ್ನು ಹತೋಟಿಯಲ್ಲಿಟ್ಟುಕೊಂಡು ಬುದ್ಧಿಯನ್ನು ಹೆಚ್ಚು ಹೆಚ್ಚಾಗಿ ಎಂದು ಬಳಸಲು ತೊಡಗುತ್ತಾನೋ ಅಂದೇ ಅವನು ಪ್ರಗತಿ ಪಥದಲ್ಲಿ ಮೊದಲ ಹೆಜ್ಜೆ ಇಟ್ಟಂತೆ – ಎಂದು ಹೇಳುವುದರ ಮೂಲಕ, ಮಾನವ ತಾನು ಭಾವಿಸಿದಂತೆ ಯಾವ ಪ್ರಗತಿಯನ್ನೂ ಸಾಧಿಸಿಲ್ಲ ಎನ್ನುವ ಅರ್ಥವನ್ನು ಹೊಮ್ಮಿಸುತ್ತಿರುವಂತೆ ಕಾಣುತ್ತದೆ. ಬಹುಶಃ ಭೌತಿಕ ಪ್ರಗತಿಯೊಂದೇ ಬೌದ್ಧಿಕ ಪ್ರಗತಿಯಾಗಲಾರದು ಎಂಬುದು ಅವರ ಗ್ರಹಿಕೆಯಿದ್ದಂತೆ ಕಾಣುತ್ತದೆ. ಏಕೆಂದರೆ ಪ್ರಗತಿ ಅಭಿವೃದ್ಧಿಗಳ ನಡುವೆಯೂ ಮನುಷ್ಯ ಅನೇಕ ಸಂದರ್ಭಗಳಲ್ಲಿ, ಅಂದರೆ ಯುದ್ಧ, ಸಂಘರ್ಷ, ಮುಷ್ಕರಗಳು ಎಲ್ಲಿಯೋ ಒಂದೊಂದು ಕಡೆ ನಡೆದಲ್ಲಿ, ಎಲ್ಲ ಅನುಕೂಲತೆಗಳು ನಿರುಪಾಯವಾಗಿ ಮಾಯವಾಗುವುದನ್ನು ಕಂಡಾಗ, ತನ್ನಂಥ ಅಸಹಾಯ ಬಡಜೀವಿ ಇನ್ನೊಬ್ಬನಿಲ್ಲ ಎಂದು ನೊಂದುಕೊಳ್ಳುತ್ತಾನೆ –ಎನ್ನುವ ಮಾತುಗಳು ಮೇಲಿನ ಅವರ ಅಭಿಪ್ರಾಯ ಸಮರ್ಥನೆಯಂತಿವೆ.

ಕಡೆಯದಾಗಿ, ಇಂದಿನ ಸಂಕೀರ್ಣ ಬದುಕಿನಲ್ಲಿ, ಅವ್ಯವಸ್ಥೆಯ ಪರಿಸರದಲ್ಲಿ– ಕೊಲೆ, ಸುಲಿಗೆ, ದರೋಡೆ, ಭ್ರಷ್ಟತೆ ಇತ್ಯಾದಿ ವಾತಾವರಣದಲ್ಲಿ ಇಂದಿನ ಮನುಷ್ಯನಿಗಿಂತ ಕಾಡು ಮನುಷ್ಯನಿಗೂ ವೇಷದ ಹೊರತು ಹೆಚ್ಚಿನ ವ್ಯತ್ಯಾಸವಿಲ್ಲ ಎಂಬ ನಿರ್ಣಾಯಕ ನಿಲುವನ್ನು ತಲುಪುತ್ತಾರೆ. ಇವರ ಆಲೋಚನೆಗಳ ಹಿಂದೆ ಮಾನವ ಅಂದರೆ ಆಧುನಿಕ ಮಾನವ, ಅತ್ಯಂತ ಅಭಿವೃದ್ಧಿ ಪರಿಸರದಲ್ಲಿ ತುಂಬಾ ತುಂಬಾ ಸಭ್ಯ ನಾಗರಿಕನಂತೆ ಕಾಣಿಸಿಕೊಳ್ಳುತ್ತಾ ಭಾವಿಸಿಕೊಳ್ಳುತ್ತಾ ಬದುಕುತ್ತಿರುವ ಮಾನವನಲ್ಲಿ ಪ್ರಾಕೃತಿಕ ಪ್ರವೃತ್ತಿಗಳಾದ ಹಿಂಸೆ, ಕ್ರೌರ್ಯ, ದ್ವೇಷ, ಅಸೂಯೆ, ವಿಕೃತ ಕಾಮ ಇತ್ಯಾದಿಗಳು ಇನ್ನೂ ಉಳಿದುಕೊಂಡು, ಪ್ರಗತಿ, ವಿಕಾಸಗಳು ಬರೀ ತೋರಿಕೆಯ ಸಂಗತಿಗಳೆಂಬಂತೆ ಕಾಣಿಸಿದ್ದಾನೆ.

ಒಟ್ಟಾರೆ ಈ ಕೃತಿ, ಮಾನವ ಪ್ರಗತಿ ಅಥವಾ ವಿಕಾಸದ ಹಂತಹಂತಗಳನ್ನು ಅಂದಂದಿನ ಬದಲಾವಣೆಗಳನ್ನು ಆಯಾ ಹಂತದಲ್ಲಿನ ಜೀವನ ಶೈಲಿಗಳನ್ನು, ಅಗತ್ಯ ಅನಿವಾರ್ಯತೆಗಳ ಕಾರಣಕ್ಕಾಗಿ ನಡೆಸಿದ ಶೋಧಗಳನ್ನು, ರೂಪಿಸಿಕೊಂಡ ವ್ಯವಸ್ಥೆಗಳನ್ನು ವರ್ತಮಾನದ ಪಂಸರದೊಂದಿಗೆ ಹೋಲಿಸುತ್ತಾ, ಒಂದು ರೀತಿಯಲ್ಲಿ ಆಧುನಿಕ ಮಾನವನ ಪ್ರಗತಿಯ ವಿಶ್ಲೇಷಣೆ ಮತ್ತು ಪರಿಣಾಮಗಳ ಕಡೆಗೆ ಓದುಗರನ್ನು ಮುಖಮಾಡುವಂತೆ ಮಾಡಿ ಮಾನವ ದುರಂತದ ಮುನ್ಸೂಚನೆಯನ್ನು ನೀಡುವಂತಿದೆ.

ಕೃತಿಯಲ್ಲಿನ ವಿವರಗಳು ಕ್ರಮಬದ್ಧವಾಗಿಲ್ಲದೆ, ಮೇಲಿಂದ ಮೇಲೆ ಪುನರುಕ್ತಿಗಳು ಕಾಣಿಸಿಕೊಳ್ಳುತ್ತಾ ೧೬ ಅಧ್ಯಾಯಗಳಲ್ಲಿ ಹರಡಿಕೊಂಡ ವಿಷಯಗಳು ಎಲ್ಲಿಂದ ಎಲ್ಲಿಗೋ ಜಿಗಿದು, ಯಾವ ವಿಷಯವನ್ನು ಕೇಂದ್ರೀಕರಿಸುತ್ತಾರೆಂಬುದೇ ಸ್ಪಷ್ಟವಾಗದೆ, ಎಲ್ಲವೂ ಕಲಸು ಮೇಲೋಗರದಂತೆ ಕಾಣಿಸುತ್ತದೆ. ವಿಷಯಗಳ ನಿರೂಪಣೆಯಲ್ಲಿ ಒಂದು ಶಿಸ್ತು, ಕ್ರಮ, ಅನುಸರಣೆಯಾಗಿದ್ದರೆ ಕೃತಿಗೆ ಇನ್ನಷ್ಟು ಮೌಲಿಕತೆ ಮತ್ತು ಅವರ ವಿಚಾರ, ಚಿಂತನೆಗಳಲ್ಲಿ ಸ್ಪಷ್ಟತೆ ಮೂಡುವುದು ಸಾಧ್ಯವಿರುತ್ತಿತ್ತು ಎನಿಸುತ್ತದೆ.



ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೮. ಸಂಶೋಧನೆಗಳ ಕುರಿತು ಅಪ್ಪಾಜಿರಾಯರ ಹಸ್ತಪ್ರತಿ ಸರಣಿ

–ಪ್ರೊ. ಎಚ್. ಶೇಷಗಿರಿರಾವ್*

ಚಾವುಂಡರಾಯನ ಲೋಕೋಪಕಾರ ಜಲವಿಜ್ಞಾನ–ತಂತ್ರಜ್ಞಾನದ ಜೊತೆ ಇನ್ನು ಮೂರು ಸಂಶೋಧನ ಕೃತಿಗಳನ್ನು ಅಧ್ಯಯನ ಮಾಡುವ ಯೋಗ ಮೊನ್ನೆ ಬಂದಿತು. ಎರಡು ತಿಂಗಳ ಹಿಂದೆ ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ಹೋಗಿದ್ದಾಗ ನಾಲ್ಕು ಪುಸ್ತಕ ಕೊಟ್ಟು "ದಯಮಾಡಿ ಇವುಗಳನ್ನು ಪರಿಶೀಲಿಸಿ ಒಂದನ್ನು ಪ್ರಶಸ್ತಿಗೆ ಆಯ್ಕೆ ಮಾಡಿ" ಎಂದು ಕೇಳಿಕೊಂಡರು. ಸರಿ ಒಂದು ವಾರದ ಓದಿಗೆ ಗ್ರಾಸ ದೊರೆಯಿತು ಎಂದು ಸಂತೋಷದಿಂದ ಒಪ್ಪಿಕೊಂಡು ಅವನ್ನು ತೆಗೆದುಕೊಂಡು ಮನೆಗೆ ಬಂದೆ. ವಿರಾಮವಾಗಿ ಕುಳಿತು ಅವು ಯಾವ ಪುಸ್ತಕಗಳು ಎಂದು ನೋಡಿದಾಗ ಒಂದು ಕ್ಷಣ ಗಾಬರಿ ಆಯಿತು. ಕಥೆ, ಕವನ, ಕಾದಂಬರಿಗಳಾದರೆ ಖುಷಿಯಾಗಿ ಓದಿ ನನ್ನ ಅಭಿಪ್ರಾಯವನ್ನು ಹೇಳಬಹುದಿತ್ತು. ಆದರೆ ಅವು ನಾಲ್ಕೂ ಸಂಶೋಧನಾ ಗ್ರಂಥಗಳು. ಒಳ್ಳೆ ಫಜೀತಿ ಆಯಿತಲ್ಲ ಎನಿಸಿತು. ಮೊಟ್ಟ ಮೊದಲು ಅವನ್ನು ಓದುವುದೇ ಪ್ರಯಾಸದ ಕೆಲಸ. ಜೊತೆಗೆ ಅವುಗಳಲ್ಲಿ ಯಾವುದು ಪ್ರಶಸ್ತಿಗೆ ಅರ್ಹ ಎಂದು ತೀರ್ಮಾನಿಸುವುದಂತೂ ನನ್ನ ಅಳವಿಗೆ ಮೀರಿದ್ದು ಎನಿಸಿತು, ಸಾಹಿತ್ಯಾಭ್ಯಾಸಿಯಾದ ನನಗೆ ಸಂಶೋಧನೆ ಎಂದರೆ ವಿದ್ವಾಂಸರ ಲೋಕ ಎಂದೇ ಭಾವನೆ. ಅನಂತರಂಗ ಪ್ರಶಸ್ತಿಯನ್ನು ಆ ವರ್ಷದ ಅತ್ಯುತ್ತಮ ಸಂಶೋಧನಾ ಗ್ರಂಥಕ್ಕೆ ಕೊಡಲು ತೀರ್ಮಾನ ಮಾಡುವ ಮೊದಲು ನಾನು ಸಂಶೋಧನೆಯ ಅರ್ಥ, ಆಳ, ಅಗಲಗಳ ಅರಿಯಬೇಕಿತ್ತು. ಯಥಾರೀತಿ ಸಂಬಂಧಿಸಿದ ಪುಸ್ತಕಗಳನ್ನು ಹುಡುಕಿದೆ. ಅಂತರ್ಜಾಲವಂತೂ ಒಂದು ರಾಶಿ ಮಾಹಿತಿ ಮುಂದೆ ಇಟ್ಟಿತು. ಸಂಶೋಧನೆ ಎಂದರೆ ಇಂಗ್ಲಿಷನಲ್ಲಿ 'Research' 'ಹುಡುಕಾಟ' ಎಂಬ ಸ್ಥೂಲ ವಿವರಣೆ ಸಿಕ್ಕಿತು. ಚಿಂತಿಸಬೇಕಾದ ವಿಷಯ ಚಿಂತನೆಗೆ ದಾರಿ ಮಾಡಿಕೊಟ್ಟಿತು. ಹುಡುಕಾಟಕ್ಕೆ ನಾನು ಹೆಸರುವಾಸಿ. ಷಾರ್ಟ್ ಸೈಟು

* ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕರು. # ೫/ಎ, ೨ನೇ ಮಹಡಿ, ೨ನೇ ಮುಖ್ಯರಸ್ತೆ ಎನ್.ಆರ್. ಕಾಲೋನಿ, ಬೆಂಗಳೂರು – ೫೬೦೦೧೯. ಮೊ: ೯೪೪೮೪೪೨೩೨೩

ದೋಷವಿರುವ ನಾನು ಓದುವಾಗ ಕನ್ನಡಕ ತೆಗೆಯುವೆ. ಓದು ಮುಗಿದ ನಂತರ ಶುರು ಹುಡುಕಾಟ. ನನ್ನ ಮೊಮ್ಮಕ್ಕಳಿಗೆ ಕನ್ನಡಕ ಕಳೆದಿದೆ ಎಂದರೆ ಖುಷಿಯೋ ಖುಷಿ. ಅವರಿಗೆ ಐಸ್‌ಕ್ರಿಮ್ ಚಾಕೊಲೇಟ್ ಆಮಿಷ ಒಡ್ಡಿದಾಗ ಮಾತ್ರ ಹುಡುಕಿ ಕೊಡುತ್ತಿದ್ದರು. ಒಂದು ಸಲವಂತೂ ಓದಿ ಅರ್ಧ ಗಂಟೆಯಾದ ಮೇಲೆ ಎಲ್ಲಿ ಹುಡುಕಿದರೂ ಸಿಗಲಿಲ್ಲ. ಮಕ್ಕಳು ಶಾಲೆಗೆ ಹೋಗಿದ್ದರು. ಕೊನೆಗೆ ಹೆಂಡತಿಯನ್ನೇ ಕರೆದು 'ದಯಮಾಡಿ ನನ್ನ ಕನ್ನಡಕ ಹುಡುಕಿಕೊಡು, ಹೊರಗೆ ಹೋಗ ಬೇಕು' ಎಂದೆ. 'ಸದಾ ನಿಮ್ಮದು ಇದೇ ಆಯಿತು,' ಎಂದು ಗೊಣಗುತ್ತಾ ಬಂದ ಮಡದಿ ನನ್ನನ್ನು ನೋಡಿ ಗೊಳ್ಳನೆ ನಕ್ಕಳು. ನಾನು ಕಕ್ಕಾಬಿಕ್ಕಿಯಾದೆ. ಬಂದಮೇಲೆ ನನ್ನ ತಲೆಗೆ ಏರಿಸಿಕೊಂಡಿದ್ದ ಕನ್ನಡಕವನ್ನು ತೆಗೆದು ಕೈಗೆ ಕೊಟ್ಟಳು. ನನಗಿರುವ ಸಂಶೋಧನೆ ಅನುಭವ ಇಷ್ಟು. ಈ ಕೆಲಸ ಆಗದು ಎಂದರೆ ಬಂದ ಪುಸ್ತಕಗಳನ್ನು ವಾಪಸ್ಸು ಮಾಡಬೇಕು, ಮನಸ್ಸು ಒಪ್ಪಲಿಲ್ಲ. ಸರಿ ಮರು-ಹುಡುಕಾಟ ಮೊದಲು ಮಾಡಿದೆ. ಹಳೆಯದನ್ನು, ಕಳೆದುದನ್ನು ಹುಡುಕುವುದು Search ಆದರೆ ಹಳೆಯದರಲ್ಲಿನ ಹೊಸತನ್ನು ಹುಡುಕುವುದು Research ಎಂದು ಹೊಳೆಯಿತು. ಆಗ ಅಡಿಗರ ಕವನದ ಸಾಲು "ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ" ನೆನಪಾಯಿತು. ಆದರೆ ತುಸು ಬದಲಾವಣೆ ಅಗತ್ಯವೆನಿಸಿತು, "ಇರುವುದೆಲ್ಲವ ಅರಿತು ಇರಬಹುದಾದ್ದನ್ನು ಅರಿಯಲು ತುಡಿವುದೇ ಸಂಶೋಧನೆ" ವಾಸ್ತವಕ್ಕೆ ಹತ್ತಿರವೆನಿಸಿತು".

ಸಾಮಾನ್ಯವಾಗಿ ಸಂಶೋಧನೆ ಎಂದರೆ ಅದು ವಿಜ್ಞಾನಿಗಳ ಕ್ಷೇತ್ರ ಎಂಬ ಭಾವನೆ ಇದೆ. ವಿದ್ಯುತ್ ಬಲ್ಬ್ ಕಂಡುಹಿಡಿದ ಥಾಮಸ್ ಅಲ್ವಾ ಎಡಿಸನ್ ನೂರಾರು ಸಂಶೋಧನೆ ಮಾಡಿರುವನೆಂದರೆ ಅದರ ವ್ಯಾಪ್ತಿಯ ಅರಿವಾಗುವುದು. ಆದರೆ ವಾಸ್ತವ ವಿಭಿನ್ನ. "ನುಡಿಯ ಹುಟ್ಟು ಬೆಳವಣಿಗೆ" ಅರಿಯಲು ಯತ್ನಿಸಿದ ಶಂ.ಬಾ ಜೋಷಿ, ಶಾಸನಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ ಅಂಶ ಕಂಡುಕೊಂಡ ಚಿ.ಮೂ. ಪೆನ್ಸಿಲಿನ್ ಅನ್ನುಕಂಡು ಹಿಡಿದ ಅಲೆಕ್ಸಾಂಢರ್ ಫ್ಲೆಮಿಂಗ್, ಪಂಪ ರನ್ನ, ಕುಮಾರವ್ಯಾಸರ ಕಾಲ ನಿರ್ಣಯಮಾಡಿದ ಡಾ. ಗೋವಿಂದ ಪೈ, ಆಕಾಶದಲ್ಲಿನ ಕಪ್ಪುರಂಧ್ರ ಕಂಡು ಹಿಡಿದ ಸುಬ್ರಮಣ್ಯಂ ಚಂದ್ರಶೇಖರ್, ಸಾಗರದ ತಳದಲ್ಲಿನ ದ್ವಾರಕೆಯ ಅವಶೇಷಗಳನ್ನು ಬೆಳಕಿಗೆ ತಂದ ಎಸ್.ಆರ್. ರಾವ್, ಅಷ್ಟೇ ಏಕೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮಾವೇಶದಲ್ಲಿ ಹಳ್ಳಿಗಳ್ಳಿಗಳಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ಶಾಸನಗಳನ್ನು ಹುಡುಕಿ ದಾಖಲಿಸುವ ಯುವಜನರು ಮಾಡುವುದೂ ಸಂಶೋಧನೆಯೇ. ಈಗ ಮಾರುಕಟ್ಟೆಯ ಸಂಶೋಧನೆಯು ಬಹು ಪ್ರಚಲಿತ. ಸಮಾಜದ ಎಲ್ಲ ರಂಗದಲ್ಲೂ ಸಂಶೋಧನೆ ನಡೆದಿದೆ. ಹಾಗಿರುವಾಗ ನಿಖರ ವ್ಯಾಖ್ಯಾನ ಸರಳ ಎನಿಸದು.

ಈ ಹುಡುಕಾಟಕ್ಕೆ ಇಂಗ್ಲಿಷ್‌ನಲ್ಲಿ ತುಸು ಹೆಚ್ಚು ಎನಿಸಬಹುದಾದ. ಸಂವಾದಿ ಶಬ್ದಗಳಿವೆ. Research, invention, discovery, exploration, investigation ಇತ್ಯಾದಿ.

ಅವುಗಳ ನಡುವೆ ಬಹು ಸೂಕ್ಷ್ಮವಾದ ವಿಭಿನ್ನತೆ ಇದೆ. ಆದರೆ ಕನ್ನಡದಲ್ಲೂ ಸಂಶೋಧನೆ, ಅವಿಷ್ಕಾರ, ಶೋಧ ಎಂಬ ಪದಗಳಿದ್ದರೂ ಸಂಶೋಧನೆ ಪದವು ವ್ಯಾಪಕವಾಗಿ ಬಳಕೆಯಾಗುತ್ತದೆ.

ಸಂಶೋಧನೆಯ ಮೊದಲ ಹಂತ ಇರುವುದನ್ನು ಪೂರ್ಣವಾಗಿ ತಿಳಿದುಕೊಂಡು ನಂತರ ಹೊಸ ಆಯಾಮಗಳನ್ನು ಹುಡುಕುವುದು, ಅಧ್ಯಯನ ಸಂಶೋಧನೆಯ ಮೂಲಬೇರು. ಅಗತ್ಯಕ್ಕೆ ತಕ್ಕಂತೆ ಪ್ರಯೋಗಶಾಲೆ, ಕ್ಷೇತ್ರಕಾರ್ಯ, ಗ್ರಂಥಾಲಯ, ಪರಾಮರ್ಶನ, ಮಾರ್ಗದರ್ಶನ ತಜ್ಞರ ಸಲಹೆ ಬೇಕಾಗುವುದು. ಹಣಕಾಸೂ ಅಷ್ಟೇ. ಕೋಟಿಗಟ್ಟಲೇ ವೆಚ್ಚದ ಉಪಕರಣ, ನೂರಾರು ಜನರ ತಂಡದ ಸಹಕಾರ ಸಮನ್ವಯ ಬಾಹ್ಯಾಕಾಶ ಸಂಶೋಧನೆಗೆ ಅಗತ್ಯವಾದರೆ, ಏಕಾಂಗಿಯಾಗಿ ಕುಳಿತು ಸ್ವಂತ ವೆಚ್ಚದಲ್ಲಿ ಹೊಸದನ್ನು ಹುಡುಕುವವರೂ ಇರುವರು. ಕಾಲಮಿತಿ ಇರುವವು ಕೆಲವಾದರೆ ಜೀವಮಾನವನ್ನೆ ಮುಡುಪಾಗಿಟ್ಟರೂ ಸಮಯ ಸಾಲದವು ಹಲವು. ಹಲವರು ಹಣ ಮತ್ತು ಹೆಸರಿಗಾಗಿ ಶೋಧಮಾಡಿ ಪೇಟೆಂಟ್ ಪಡೆದು, ಸಂಶೋಧನೆಯನ್ನೇ ಶೋಷಣೆಯ ಸಾಧನ ಮಾಡಿಕೊಂಡಿರುವುದೂ ಇದೆ. ಪ್ರಾಯೋಜಿತರ ಹಿತಾಸಕ್ತಿಗೆ ಅನುಗುಣವಾಗಿ ಫಲಿತಾಂಶ ಕೊಡುವವರೂ ಇದ್ದಾರೆ. ಇನ್ನೊಬ್ಬರ ಶ್ರಮದ ಫಲವನ್ನು ಲಪಟಾಯಿಸುವವರೂ ಇರುವರು. ಜ್ಞಾನ ಮತ್ತು ಜನ ಹಿತಕ್ಕಾಗಿಯೇ ದುಡಿಯುವವರೇ ಅಧಿಕ. ಈ ಗುಂಪಿಗೆ ಕಲೆ, ಸಾಹಿತ್ಯ ಮತ್ತು ಇತಿಹಾಸಿದ ಸಂಶೋಧಕರು ಸೇರುವರು. ಅವರು ಏನಿದ್ದರೂ ಎಲೆಯ ಮರೆಯ ಕಾಯಿ. ಯಾವುದೇ ಸಂಶೋಧನೆಯೂ ಅಂತಿಮ ಅಲ್ಲ. ಒಂದು ಕಾಲಕ್ಕೆ ಮೂಲವಸ್ತುವಿನ ಅತ್ಯಂತ ಚಿಕ್ಕಭಾಗ ಅಣು, ಅದನ್ನು ವಿಭಜಿಸುವುದು ಸಾಧ್ಯವೇ ಇಲ್ಲ ಎಂದರು. ಆದರೆ ನೀಲ್‌ಭೋರ್ ಅಣುಗಳ ವಿಭಜನೆ ಸಾಧ್ಯ. ಅವುಗಳನ್ನು ಪರಮಾಣುಗಳಾಗಿ ಒಡೆಯಬಹುದು ಎಂದು ಸಂಶೋಧನೆ ಮಾಡಿದ. ನಂತರ ಪರಮಾಣುವನ್ನೂ ಎಲೆಕ್ಟ್ರಾನ್ ನ್ಯೂಟ್ರಾನ್ ಮತ್ತು ಪ್ರೋಟಾನ್‌ಗಳನ್ನಾಗಿಸಬಹುದು ಎಂದು ಕಂಡು ಹಿಡಿಯಲಾಯಿತು. ಇತ್ತೀಚೆಗೆ ದೇವಕಣ ಎಂಬ ಇನ್ನೊಂದು ಪರಿಕಲ್ಪನೆ ಜಾರಿಯಲ್ಲಿದೆ. ಹೀಗೆ ಕಾಲದಿಂದ ಕಾಲಕ್ಕೆ ಸಂಶೋಧನೆಗಳು ವಿಷಯವನ್ನು ಸ್ಪಷ್ಟಪಡಿಸುತ್ತವೆ. ವ್ಯಾಪ್ತಿಯನ್ನು ವಿಸ್ತರಿಸುತ್ತವೆ.

ಸಾಹಿತ್ಯದಲ್ಲೂ ಅಷ್ಟೇ ಹೊಸ ಪುರಾವೆಗಳು ದೊರೆತಾಗ ಹಳೆಯಕಲ್ಪನೆ ಬದಲಾಗುತ್ತವೆ. ಕನ್ನಡದ ಪ್ರಥಮ ಲಾಕ್ಷಣಿಕ ಗ್ರಂಥ ಮೊದಲು ಅರಸನಾದ ನೃಪತುಂಗನ ಕೃತಿ ಎಂದುಕೊಂಡಿದ್ದರು. ಆದರೆ ಅದು ಶ್ರೀ ವಿಜಯನದು ಎಂದು ಹೊಸದಾಗಿ ಸಿದ್ಧಮಾಡಲಾಗಿದೆ.

ಭೂಮಿಯ ಸುತ್ತಲೂ ಸೂರ್ಯ ಮತ್ತು ಇತರ ಗ್ರಹಗಳು ಸುತ್ತುತ್ತವೆ ಎಂಬ ಶತಶತಮಾನಗಳ ನಂಬಿಕೆಯನ್ನು ಖಗೋಳ ವಿಜ್ಞಾನಿ ಕೆಪ್ಲರ್ ಸುಳ್ಳು ಮಾಡಿದ. ಸೂರ್ಯನೇ ಸೌರವ್ಯೂಹದ ಕೇಂದ್ರ ಎಂದು ಸಿದ್ಧಮಾಡಿದ. ಇತ್ತೀಚಿನವರೆಗೆ ಗ್ರಹ ಎಂದು ಪರಿಗಣಿತವಾಗಿದ್ದ ಪ್ಲೂಟೊ ಈಗ ಗ್ರಹ ಅಲ್ಲ ಎಂದು ಸಿದ್ಧವಾಗಿದೆ.

ಅಂದರೆ ಯಾವುದೇ ವಿಷಯವನ್ನು ಆಳವಾಗಿ ಅಧ್ಯಯನ ಮಾಡಿ ಅದರ ಬಗೆಗಿನ ಮಾಹಿತಿ ಮತ್ತು ದತ್ತಾಂಶಗಳನ್ನು ಸಂಗ್ರಹಿಸಿ, ಅವುಗಳನ್ನು ವಿಶ್ಲೇಷಿಸಿ, ಸತ್ಯಾಂಶವನ್ನು ಒರೆಗೆ ಹಚ್ಚಿ, ಹೊಸ ಆಯಾಮಗಳನ್ನು ಬೆಳಕಿಗೆ ತಂದು ನಿಜ ಜೀವನಕ್ಕೆ ಅನ್ವಯಿಸುವುದೇ ಸಂಶೋಧನೆ ಎಂಬುದನ್ನು ಮನಗಂಡೆ.

ಈ ಎಲ್ಲ ಮಾನದಂಡಗಳೊಡನೆ ಸನ್ನದ್ಧನಾಗಿ ಆ ಪುಸ್ತಕಗಳನ್ನು ಓದಲು ಕುಳಿತೆ. ಪರಿಶೀಲಿಸ ಬೇಕಿದ್ದ ನಾಲ್ಕು ಪುಸ್ತಕಗಳಲ್ಲಿ ಎರಡು ಮಹಿಳೆಯರವು. ದಕ್ಷಿಣ ಕನ್ನಡದ "ತುಂಡು ಭೂತಗಳು" ಪರಂಪರೆಯ ಅನಾವರಣ ಮಾಡಿದ ಕೃತಿ. ಭೂತಾರಾಧನೆ ನಡೆಯುವುದು ಸರಿ ರಾತ್ರಿಗಳಲ್ಲಿ, ಮಹಿಳೆಯೊಬ್ಬಳು ಮಾಡಿದ ಕ್ಷೇತ್ರಕಾರ್ಯದ ಫಲಶೃತಿ ಈ ಕೃತಿ. ಜಾನಪದ ಮತ್ತು ಧಾರ್ಮಿಕ ನಂಬಿಕೆಯ ಮೇಲೆ ಬೆಳಕು ಚೆಲ್ಲಿದೆ.

ಇನ್ನೊಂದು ಹರಪ್ಪಾ ಸಂಸ್ಕೃತಿಯ ಬಗೆಗಿನ ಸಂಶೋಧನೆಗಳ ಸಾರ. ಅದು ಅಂತಾರಾಷ್ಟ್ರೀಯ ಮಟ್ಟದ ವಿಷಯವನ್ನು ಸಂಗ್ರಹಿಸುವ ಒಂದು ಪ್ರಯತ್ನ. ವ್ಯಾಪಕ ಅಧ್ಯಯನ ಎದ್ದು ಕಾಣುವುದು. ಮೂರನೆಯದು ಬಳ್ಳಾರಿ ಜಿಲ್ಲೆಯ ಗ್ರಾಮ ಒಂದರಲ್ಲಿನ ಹೋಲಿ ಹುಣ್ಣಿಮೆಯ ಸ್ಥಳೀಯ ಹಾಡುಗಳು, ಕಾಣೆಯಾಗುತ್ತಿರುವ ಉಪ ಸಂಸ್ಕೃತಿಯ ದಾಖಲೆ ಮತ್ತು ವಿಶ್ಲೇಷಣೆ. ನಾಲ್ಕನೆಯದು "ಚಾವುಂಡರಾಯನ ಲೋಕೋಪಕಾರಿಯಲ್ಲಿನ ಜಲವಿಜ್ಞಾನ ತಂತ್ರಜ್ಞಾನ."

ಶಾಸನ, ಇತಿಹಾಸ, ಜನಪದ ಸಾಹಿತ್ಯ ಮತ್ತು ವಿಜ್ಞಾನಗಳನ್ನು ಒಳಗೊಂಡ ಹತ್ತನೆಯ ಶತಮಾನದ ಕೃತಿಯ ಕುರಿತಾದ ಸಂಶೋಧನೆ : ಈ ಪುಸ್ತಕದ ಶೀರ್ಷಿಕೆಯೇ ವಿಷಯದ ಸಂಕೀರ್ಣತೆಯನ್ನು ಸೂಚ್ಯವಾಗಿ ತಿಳಿಸುವುದು. ಇಲ್ಲಿ ಸುಮಾರು ಸಾವಿರ ವರ್ಷದ ಹಿಂದಿನ ಕೃತಿಯಲ್ಲಿನ ಜಲವಿಜ್ಞಾನ ಮತ್ತು ತಂತ್ರಜ್ಞಾನದ ಸಮನ್ವಯತೆ ಇದೆ. ಚಾವುಂಡರಾಯ ಎಂದೊಡನೆ ಶ್ರವಣಬೆಳಗೊಳದ ಗೊಮ್ಮಟೇಶ್ವರನ ನಿರ್ಮಾಣಕ್ಕೆ ಕಾರಣಕರ್ತನಾದವನು ಎಂಬ ಚಿತ್ರ ಬರುವುದು ಸಹಜ. ಆದರೆ ಈ ಕವಿ ಬೇರೆಯವನು. ಮಾನ್ಯಖೇಟದ ರಾಷ್ಟ್ರಕೂಟ ವಂಶದ ನೃಪತುಂಗನ ಪೀಳಿಗೆಯ ಅರಸನ ಆಸ್ಥಾನ ಕವಿಯಾಗಿದ್ದವನು. ಜೊತೆಗೆ ಇದು ಕಾವ್ಯ ಅಲ್ಲ. ಬಹುತೇಕ ಕಂದ ಪದ್ಯಗಳಲ್ಲಿ ರಚಿಸಿದ ವಿಶ್ವಕೋಶ, ಇದರ ಮೂಲ ಸಂಸ್ಕೃತ. ಆದರೆ ಕನ್ನಡದಲ್ಲಿ ಸ್ವತಂತ್ರ ಕೃತಿ ಎನಿಸುವಷ್ಟು ಸರಳ ಮತ್ತು ಸುಂದರ.

ಪ್ರಸ್ತುತ ಪುಸ್ತಕದ ಹಿರಿಮೆ ಇರುವುದು ಅದರ ಶೀರ್ಷಿಕೆಯೇ ತಿಳಿಸುವಂತೆ ಅದರ ಲೋಕೋಪಕಾರ ಗುಣದಲ್ಲಿ. ಪಂಚ ಭೂತಗಳಲ್ಲಿ ಪ್ರಕೃತಿಯ ಎರಡು ಉದಾರ ಕೊಡುಗೆಗಳು, ಜೀವ ಜಗತ್ತಿನ ಉಳಿವಿಗೆ ಅಗತ್ಯವಾದ ಗಾಳಿ ಮತ್ತು ನೀರು. ಈಗ ಬದಲಾದ ಪರಿಸರದಲ್ಲಿ ಜೀವಜಲವು ಉಚಿತವಾಗಿ ದೊರೆಯುವ ಮಾತು ದೂರ ಉಳಿಯಿತು. ಕ್ವಚಿತ್ತಾಗಿ ದೊರಕುವುದು ಕಷ್ಟವಾಗಿದೆ. ಜೊತೆಗೆ ದೊರೆತ ನೀರೂ

ಬಳಸಲು ಉಚಿತವೇ ಎಂದು ಚಿಂತನೆ ನಡೆಸಬೇಕಿದೆ. ಈ ಹಿನ್ನೆಲೆಯಿಂದಾಗಿ ಪರೋಪಕಾರ ಪುಸ್ತಕ ಆದ್ಯತೆ ಪಡೆಯುತ್ತದೆ.

ನೀರಿನ ಬಹು ಬಳಕೆಯ ಜೊತೆಗೆ ದುರ್ಬಳಕೆಯಿಂದ ಜಲಮಾಲಿನ್ಯ ಮೇರೆ ಮೀರಿದೆ. ಮೊನ್ನೆ ಮೊನ್ನೆ ಹಂಪೆಗೆ ಹೋದಾಗ ಉಗ್ರ ನರಸಿಂಹನ ಹತ್ತಿರ ಜಳುಜುಳುನೆ ಹರಿಯುತ್ತಿರುವ ಕಿರುಗಾಲುವೆಯ ತಿಳಿ ನೀರು ನೋಡಿ ಕುಡಿಯಲು ಬಾಗಿ ಕೈನೀಡಿದಾಗ ಅಲ್ಲಿರುವ ಕೂಲಿ ಕಾಯಕದ ಮಹಿಳೆಯೊಬ್ಬಳು "ಬೇಡ, ಸಾರು, ಕುಡಿಯಬೇಡಿ" ಎಂದು ತಡೆದಳು. ಗಂಗಾಸ್ನಾನ, ತುಂಗಪಾನ ಎಂಬ ಗಾದೆಗೆ ಕಾರಣವಾಗಿದ್ದ ತುಂಗಭದ್ರಾನದಿಯ ನೀರನ್ನು ಕುಡಿಯಬೇಡ ಎಂದಾಗ ಅಚ್ಚರಿ ಆಯಿತು. ಕಾರಣ ಕೇಳಿದೆ. "ಸ್ವಾಮಿ, ರಸ ಗೊಬ್ಬರ ಮತ್ತು ಕೀಟನಾಶಕದ ಅತಿ ಬಳಕೆಯಿಂದ ನೀರು ಕಲುಷಿತವಾಗಿದೆ, ಕುಡಿದರೆ ಅಪಾಯ ಖಂಡಿತ ಎಂದಳು. ನಾನು ಗಾಬರಿಯಿಂದ ಬೊಗಸೆಯಲ್ಲಿದ್ದ ನೀರು ಚೆಲ್ಲಿದೆ. ಎಳನೀರಿಗಿಂತ ಸಿಹಿಯಾಗಿದ್ದ ನದಿನೀರಿಗೆ ಬಂದ ದುರ್ಗತಿ ಕಂಡು ಖೇದವಾಯಿತು. ಕೈಗಾರಿಕೀಕರಣದ ಪ್ರಭಾವ ಹೇಗೆ ಹರಿವ ನೀರನ್ನು ವಿಷಮಾಡಿದೆ ಎಂಬುದಕ್ಕೆ ಪ್ರತ್ಯಕ್ಷ ಸಾಕ್ಷಿ ದೊರಕಿತು.

ಹಿಂದೆ ಹೆಣ್ಣಿಗಾಗಿ, ಮಣ್ಣಿಗಾಗಿ, ಹೊನ್ನಿಗಾಗಿ ಯುದ್ಧಗಳಾಗುತ್ತಿದ್ದವು. ಆದರೆ ಈಗ ನೀರಿಗಾಗಿ ಕದನಗಳಾಗುವ ಕಾಲ ಬಂದಿದೆ. ಕಾವೇರಿ ನದಿ ನೀರಿನ ಹಂಚಿಕೆಯ ಸಮಸ್ಯೆಯು ಎರಡು ನೆರೆ ರಾಜ್ಯಗಳನ್ನು ಕದನ ಕುತೂಹಲಿಗಳನ್ನಾಗಿ ಮಾಡಿದೆ. ಇಂತಹ ಜ್ವಲಂತ ಸಮಸ್ಯೆಯ ಬಗೆಗಿನ ಮಾಹಿತಿಯನ್ನು ೧೦೦೦ ವರ್ಷದ ಹಿಂದೆಯೇ ನೀಡಿದ ಕೃತಿಯ ಕುರಿತಾದ ವೈಜ್ಞಾನಿಕ ದೃಷ್ಟಿಯ ಸಂಶೋಧನೆ ಇದಾಗಿದೆ.

ಕಾಮನ ಬಿಲ್ಲಿನಿಂದ ಪ್ರಾರಂಭವಾಗುವ ಇದು ಕುತೂಹಲ ಹೆಚ್ಚಿಸುತ್ತಾ ಹೋಗುತ್ತದೆ. ಯಾವುದೇ ಕೃತಿಯ ಯಶಸ್ಸು ಇರುವುದು ಅದು ನಮ್ಮ ನೆನಪನ್ನು ಕೆದಕಿ ಅದು ನಮ್ಮ ಅನುಭವವೂ ಹೌದು ಎನಿಸಿದಾಗ. ಇಲ್ಲಿನ ವಿವರಣೆ ಅರ್ಧ ಶತಮಾನದ ಹಿಂದೆ ನನ್ನನ್ನು ಒಯ್ದಿತು. ಆಗಿನ್ನು ಕೃಷಿ ಇಲಾಖೆ ಹೆಸರಿಗೆ ಮಾತ್ರ ಇದ್ದ ಕಾಲ. ಹಳ್ಳಿಗರು ಮಳೆಗಾಳಿಯ ಮುನ್ಸೂಚನೆಗೆ ತಮ್ಮದೇ ಆದ ವಿಧಾನ ಅನುಸರಿಸುತಿದ್ದರು. ಬಿಳಿ ಮೋಡ ಕಟ್ಟಿದರೆ ಮಳೆ ಬಾರದು, ಚಂದ್ರನಿಗೆ ಕಟ್ಟೆ ಕಟ್ಟಿದರೆ ಮಳೆ ಅಭಾವ, ದಕ್ಷಿಣದಲ್ಲಿ ಮಿಂಚಿದರೆ ಮಳೆ ಶೂನ್ಯ, ಕಪ್ಪು ಮೋಡವಿದ್ದರೆ ಮಳೆ ಖಚಿತ, ಕಪ್ಪೆಗಳು ವಟಗುಟ್ಟಿದರೆ, ದೀಪದ ಹುಳು ಹೆಚ್ಚಾದರೆ ಮಳೆ ಮುಂದುವರಿಯುವುದು, ಬೆಳಗ್ಗೆ ಬಂದ ಮಳೆ ಸಂಜೆ ಬಂದ ಅಳಿಯ ಬೇಗನೆ ಹೋಗುವುದಿಲ್ಲ, "ಸ್ವಾತಿ ಮಳಿ ಹೇತೆನೆಂದರೂ ಬಿಡದು," ಕುರುಡು ಚಿತ್ತಿ," "ಉತ್ತರಿ ಮಳಿ ಉಸ್ ಅಂದರೆ ಹೋತು", "ರೋಹಿಣಿ ಮಳೆ ಬಂದರೆ ಓಣಿ ಎಲ್ಲ ಜೋಳ" ಎಂಬ ಮೊದಲಾದ ನಾಣ್ಣುಡಿಗಳು ದೇಶೀಯ ಜಾಣ್ಮೆಯ ಪ್ರತೀಕವಾಗಿದ್ದವು. ನಿಜ ಆಗತಾನೆ ಬಂದಿದ್ದ ಊರಿನಲ್ಲಿನ ಒಂದೋ ಎರಡೋ ರೇಡಿಯೋದಲ್ಲಿ ಹವಾ ಮುನ್ಸೂಚನೆ ಬಿತ್ತರವಾಗುತ್ತಿದ್ದಿತು. ರೇಡಿಯೋದಲ್ಲಿ

ಇಂದು ಜಡಿ ಮಳೆ ಎಂದಾಗ ರಣ ರಣ ಬಿಸಿಲು, ಈದಿನ ಒಣ ಹವೆ ಎಂದಾಗ ಮಣ್ಣಿನ ಮಾಳಿಗೆಯಿಂದ ತೊಟ್ಟಿಕ್ಕುವ ಜಂತಹನಿ, ನೋಡಿ ಜನ ನಗುವುದು ಸಾಮಾನ್ಯವಾಗಿತ್ತು. ರೆಂಟೆ, ಕುಂಟೆ ಹೂಡಲು, ಬೀಜ ಬಿತ್ತಲು ರಾಶಿ ಮಾಡಲು ನಮ್ಮ ಹಳ್ಳಿಗರು ಪಡೆದ ಪರಂಪರಾಗತ ಜ್ಞಾನ ಬಳಸುತ್ತಿದ್ದರು, ಅದಕ್ಕೆ ಸಾವಿರಾರು ವರ್ಷದ ಇತಿಹಾಸವಿದೆ ಎಂದು ಈ ಕೃತಿಯ ಮೂಲಕ ತಿಳಿಯಿತು. ಬಾವಿ, ಕೆರೆ, ಕೊಳಗಳ ನಿರ್ಮಾಣ ಮತ್ತು ನಿರ್ವಹಣೆ ವಿವರ ವೈಜ್ಞಾನಿಕವಾಗಿತ್ತು ಎಂಬುದನ್ನು ಈ ಕೃತಿ ವಿಶದಪಡಿಸುವುದು.

ಸಂಶೋಧಕರಾದ ಡಾ. ಹರಿಹರ ಶ್ರೀನವಾಸರಾಯರು ವೃತ್ತಿಯಿಂದ ಜಲವಿಜ್ಞಾನ ತಜ್ಞರು, ಪ್ರವೃತ್ತಿಯಿಂದ ಇತಿಹಾಸ ಸಂಶೋಧಕರು. ವೈಜ್ಞಾನಿಕ ಅಂಶಗಳ ಅನ್ವಯ ಅವರಿಗೆ ಅತಿ ಸಲೀಸು. ಅದರಿಂದ ಮನರಂಜನೆ ಎನಿಸಬಹುದಾದ ವಿವರಗಳು ಮನೋವಿಕಾಸಕ್ಕೆ ಕಾರಣವಾಗುವಂತೆ ಬರೆದಿರುವರು.

ನೀರು ಜಗತ್ತಿನ ಜೀವ ರಾಶಿಗಳನ್ನು ಒಗ್ಗೂಡಿಸುವ ಸಾಧನವಾಗಿದೆ. ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಭೂ ವಿಜ್ಞಾನ, ರಸಾಯನ ಶಾಸ್ತ್ರ, ಖಗೋಳ ಶಾಸ್ತ್ರ ಎಲ್ಲವೂ ಜಲಶಾಸ್ತ್ರದೊಂದಿಗೆ ಅಂತರ್ ಸಂಬಂಧ ಹೊಂದಿವೆ. ಯಾವ ಸಸ್ಯಯಗಳು ನೀರಿನ ಇರವನ್ನು ಸೂಚಿಸುತ್ತವೆ, ಮಣ್ಣಿನ ಬಣ್ಣದಿಂದ ನೀರಿನ ಬಾಹುಳ್ಯ ಮತ್ತು ರುಚಿಯ ನಿರ್ಧಾರ ಹೇಗಾಗುತ್ತದೆ, ಮನೆಯ ಅಥವಾ ಊರಿನ ಯಾವ ದಿಶೆಯಲ್ಲಿ ನೀರು ಇದ್ದರೆ ಏಳಿಗೆ ಅಥವಾ ಅವನತಿ ಎಂಬುದನ್ನು ನಾವು ಸಂಪ್ರದಾಯ, ಮೂಢನಂಬಿಕೆ ಎನ್ನವುದು ತುಂಬಾ ಸರಳೀಕರಣ. ಅಗಲವಾದ ಎಲೆ ಇರುವ, ಮುಳ್ಳು ಇಲ್ಲದ ಬನ್ನಿ ಮರದ ಹತ್ತಿರದಲ್ಲಿ, ಹುತ್ತದ ಸುತ್ತ ಮುತ್ತ ನೀರಿನ ಸೆಲೆ ಇರುವುದು ಹಿಂದಿನಕಾಲದ ಜಲಶೋಧಕರು ಸಸ್ಯದ ಟೊಂಗೆ ಹಿಡಿದು ನೀರಿರುವ ಜಾಗವನ್ನು ಖಚಿತವಾಗಿ ತೋರಿಸುತ್ತಿದ್ದ ರಹಸ್ಯದ ವಿವರವನ್ನು ಈ ಕೃತಿ ನೀಡುತ್ತದೆ. ಇವೆಲ್ಲದರ ವಿಶ್ಲೇಷಣೆಯನ್ನು ವೈಜ್ಞಾನಿಕ ಆಧಾರದ ಮೇಲೆ ಮಾಡಿರುವುದು ಸಂಶೋಧನೆಯ ವ್ಯಾಪ್ತಿಯನ್ನು ತೋರುವುದು. ಈ ಅಂತರ್ ಶಿಸ್ತೀಯ ವಿಶ್ಲೇಷಣೆಯು ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.

ಇನ್ನು ಯಾವುದೇ ಸಂಶೋಧನೆಯು ಜನ ಜೀವನಕ್ಕೆ ಹತ್ತಿರವಾಗುವುದು, ಉಪಯುಕ್ತವಾಗುವುದು ಅದರ ಅಧ್ಯಯನ ಮತ್ತು ಅನ್ವಯದಿಂದ. ಅದು ಜೀವನ್ಮುಖಿಯಾದಾಗಲೇ ಅದಕ್ಕೆ ಹೆಚ್ಚಿನ ಬೆಲೆ. ಈಗಿರುವ ನೀರಿನ ಸಮಸ್ಯೆಯ ಪರಿಹಾರಕ್ಕೆ ಪ್ರಯತ್ನಿಸುವವರು ಈ ಅವಕಾಶವನ್ನು ಬಳಸಿಕೊಳ್ಳುವುದು ಅಗತ್ಯ. ಈಗ ಕೋಟ್ಯಂತರ ರೂಪಾಯಿ ಹಣ ವೆಚ್ಚ ಮಾಡಿ ಹೂಳೆತ್ತಿಸಿ ಕೆರೆಯ ಪುನರುಜ್ಜೀವನ ಮಾಡಿಸುವ ಯೋಜನೆಗಳು ವಿಫಲವಾಗುತ್ತಿರುವುದು ಜಲಾಶಯಕ್ಕೆ ಬರಬೇಕಾದ ನೀರು ಬಾರದೆ ಇರುವುದರಿಂದ ಮತ್ತು ಬರಬಾರದ ಕೊಳೆ ಮತ್ತು ತ್ಯಾಜ್ಯಗಳನ್ನು ಮುಕ್ತವಾಗಿ ಹರಿಯ ಬಿಟ್ಟಿರುವುದರಿಂದ. ಹಿಂದೆ ನೀರನ್ನು ದೇವರು ಎಂದುಕೊಂಡಿದ್ದರು.

ಅದು ಮೂಢನಂಬಿಕೆಯಾಗಿ ಆಧುನಿಕರಿಗೆ ಕಾಣಿಸುವುದು ಸಹಜ. ಅದರ ಹಿಂದಿನ ಉದ್ದೇಶ ದೇವರು ಎಂಬ ಭಕ್ತಿ ಅಥವಾ ಭಯದಿಂದಲಾದರೂ ನೀರಿನ ದುರ್ಬಳಕೆ ಅಥವಾ ಮಾಲಿನ್ಯ ನಡೆಯದಿರಲಿ ಎಂದು.

ಈಗ ಪುಸ್ತಕಗಳಿಗೆ ಪ್ರಶಸ್ತಿಗಳ ಮಹಾಪುರವೇ ಹರಿದಿದೆ. ಪ್ರಶಸ್ತಿಯ ಮೊತ್ತವೂ ಆಕರ್ಷಕವಾಗಿದೆ. ಆದರೆ ಈ ಪ್ರಶಸ್ತಿಯು ವಿಭಿನ್ನವಾಗಿದೆ. ಕನ್ನಡದ ಕಣ್ವರಾದ ಬಿ.ಎಂ.ಶ್ರೀ ಹೆಸರಿನಲ್ಲಿ ಪ್ರತಿಷ್ಠಾನವನ್ನು ಸ್ಥಾಪಿಸಿದವರು ಎಂ.ವಿ. ಸೀತಾರಾಮಯ್ಯನವರು, ಉದ್ಘಾಟಿಸಿವರು ಅವರ ಗುರುಗಳಾದ ಮತ್ತು ಬಿ.ಎಂ. ಶ್ರೀಯವರ ನೇರ ಶಿಷ್ಯರಾದ ಕುವೆಂಪು ಅವರು. ಈ ಮೂವರು ಮಹನೀಯರ ಆಶಯದಂತೆ ಪ್ರತಿಷ್ಠಾನವು ಅಂತರ್‌ಗಂಗೆಯಾಗಿ ಸದ್ದುಗದ್ದಲವಿಲ್ಲದೆ ಕನ್ನಡದ ಕೆಲಸ ಮಾಡುತ್ತಿದೆ.

"ಅನಂತರಂಗ" ಪ್ರಶಸ್ತಿ ಪಡೆದ ಈ ಪುಸ್ತಕವನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದೆ. ಪರಿಸರ ಕಾಳಜಿ ಇರುವ ಎಲ್ಲರ ಮನೆಯ ಓದುವ ಮೇಜಿನ ಮೇಲೆ ಸ್ಥಾನ ಪಡೆಯಲು ಸರ್ವಥಾ ಯೋಗ್ಯವಾಗಿದೆ.



ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೪

# ೯. ಡಾ. ದೊಡ್ಡರಂಗೇಗೌಡ ಅವರ 'ಪೃಥ್ವಿ ಪ್ರಗಾಥ'

–ಪ್ರೊ. ಜಿ. ಅಬ್ದುಲ್ ಬಷೀರ್*

ಡಾ. ದೊಡ್ಡರಂಗೇಗಂಡ ಅವರು ನನ್ನ ಆತ್ಮೀಯ ಮಿತ್ರರು. ಬಿ.ಎ. (ಆನರ್ಸ್) ಮತ್ತು ಎಂ.ಎ. ತರಗತಿಗಳಲ್ಲಿ (೧೯೬೭–೧೯೭೨) ನನ್ನ ಸಹಪಾಠಿಯಾಗಿದ್ದರು. ಬೆಂಗಳೂರಿನ ಎಸ್.ಎಸ್.ಎನ್. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ, ಪ್ರಾಂಶುಪಾಲರಾಗಿ ಮೂವತ್ತಾರು ವರ್ಷ ಸಮರ್ಥ ರೀತಿಯಲ್ಲಿ ಸೇವೆಯನ್ನು ಸಲ್ಲಿಸಿ ನಿವೃತ್ತರಾಗಿದ್ದಾರೆ. ಶ್ರೀಯುತರ ಪತ್ನಿ ಡಾ. ರಾಜೇಶ್ವರಿ ಗೌಡ ಮತ್ತು ಪುತ್ರ ಡಾ. ಭರತ್ ಡಿ. ಕನ್ನಡ ಅಧ್ಯಾಪಕರು. ಭರತ್ ಅವರು ಖ್ಯಾತ ಕವಿಗಳೂ, ವಿಮರ್ಶಕರೂ ಆಗಿದ್ದಾರೆ. ಗೌಡರ ಪುತ್ರಿ ಶ್ರೀಮತಿ ಡಿ. ಸ್ಮಿತಾ. ಎಲ್ಲರೂ ಅಚ್ಚಗನ್ನಡ ಅಧ್ಯಾಪಕರ ಕುಟುಂಬಕ್ಕೆ ಸೇರಿದವರು. ಇದು ಆಕಸ್ಮಿಕವಾಗಿರಬಹುದು. ಆದರೂ ಈ ಸಂಗತಿ ನನಗೆ ವಿಸ್ಮಯಕಾರಿ ಹಾಗೂ ಸಂತೋಷಭರಿತವಾದುದು. 'ದೊರಂಗೌ' ಅವರು ಸ್ನೇಹಿತರನ್ನು ಕಂಡಾಗ ನಗುಮೊಗದಿಂದ ಮಾತನಾಡಿಸುವ ಬಗೆ ವೈಯಕ್ತಿಕವಾಗಿ ನನಗೆ ತುಂಬ ಇಷ್ಟವಾಗುತ್ತದೆ. ಅವರ ನಗು ಅಂತರಂಗದಿಂದ ಹೊಮ್ಮುವಂಥದ್ದೇ ಹೊರತು ಕೃತಕವಾದುದಲ್ಲ. ಅವರಲ್ಲಿ ಬಳಗೊಂದು ಹೊರಗೊಂದು ಇಲ್ಲ. ಅವರ ಬಿಚ್ಚು ಮನಸ್ಸಿನ ಮಾತುಗಳು ಅವರ ಸರಳತೆ, ಸಜ್ಜನಿಕೆ ಅವರಿಗೇ ವಿಶಿಷ್ಟವಾದವು. ಅವರ ಕವಿತೆಯಂತೆ, ಅವರ ಮಾತುಗಳೂ ಸ್ವೋಪಜ್ಞತೆಯಿಂದ, ಬೋಧಕ ದೃಷ್ಟಿಯಿಂದ ಕೂಡಿರುತ್ತವೆ. ಅವರೊಡನೆ ಮಾತನಾಡುವುದು, ಅವರ ಗ್ರಂಥಗಳನ್ನು ಕುರಿತು ಬರೆಯುವುದು, ಅವರ ಸ್ನೇಹಿತನಾದ ನನಗೆ ಹೆಮ್ಮೆಯ ಸಂಗತಿಯಾಗಿದೆ. ಅವರು ಕನ್ನಡದ ಬಗ್ಗೆ, ಕರ್ನಾಟಕದ ಬಗ್ಗೆ, ಭಾರತದೇಶದ ಬಗ್ಗೆ ಇಟ್ಟಿರುವ ಅಭಿಮಾನ, ಪ್ರೀತಿ ಅಸದೃಶವಾದದ್ದು. ನಮ್ಮ ನಾಡು ಕಂಡ ಹಿರಿಯ ಸಂಸ್ಕೃತಿ ಚಿಂತಕರೂ, ಹೆಸರಾಂತ ಕವಿಗಳೂ, ವಿಮರ್ಶಕರೂ, ಚಲನಚಿತ್ರ ಗೀತೆ–ಸಂಭಾಷಣಾ ರಚನಕಾರರೂ, ಗಾಯಕರೂ ಆಗಿರುವಂಥವರು.

* ಸಂಪಾದಕರು, ನಿವೃತ್ತ ಕನ್ನಡ ಪ್ರಾಧ್ಯಾಪಕರು, # ೫, ೮ನೇ ತಿರುವು, ೪ನೇ ಮುಖ್ಯರಸ್ತೆ, ಬೈರಸಂದ್ರ, ಜಯನಗರ, ೧ನೇ ಬ್ಲಾಕ್, ಪೂರ್ವ, ಬೆಂಗಳೂರು – ೫೬೦ ೦೧೧. ಮೊ. ೯೦೦೮೭೬೩೩೬

'ದೊರಂಗೌ' ಅವರು ನಮ್ಮ ಸಮಾಜದಲ್ಲಿ ತಳವೂರಿರುವ ಲೋಪ-ದೋಷಗಳು, ಅನ್ಯಾಯ-ಅನಾಚಾರಗಳನ್ನು ಮುಲಾಜಿಲ್ಲದೆ ಟೀಕಿಸುತ್ತಾರೆ; ಬಯಲಿಗೆಳೆಯುತ್ತಾರೆ; ಅವರ ಮಾತು ನಿಸ್ಸಂಕೋಚವಾದುದು; ಭೀತಿ ರಹಿತವಾದುದು; ಮುಚ್ಚುಮರೆಯಿಲ್ಲದ್ದು; ನೇರ, ಸ್ಪಷ್ಟ, ಸರಳ ! ಅವರ ಕೃತಿಗಳಲ್ಲಿ ಪ್ರಶ್ನೆ, ವಿಸ್ಮಯ, ಬೇಸರ, ಖಂಡನೆಯ ಮಾತುಗಳು ಬರುತ್ತವೆ. ಎಂಬತ್ತನಾಲ್ಕು ಗ್ರಂಥಗಳನ್ನು ಪ್ರಕಟಿಸಿ, ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿರುವ 'ದೊರಂಗೌ' ಅವರ ಅಂತರಾಳದ ತುಡಿತ, ಒಟ್ಟಾರೆ ಸಮಾಜಮುಖಿಯಾಗಿರುವುದು ಆರೋಗ್ಯಕರ ಲಕ್ಷಣವಾಗಿದೆ. ಅವರ ಗದ್ಯ ಕೃತಿಗಳೇ ಇರಲಿ, ಪದ್ಯ ಕೃತಿಗಳೇ ಇರಲಿ ಅವುಗಳಲ್ಲಿ ಕನ್ನಡ ಸೇವೆ, ನಾಡಿನ ಬಗ್ಗೆ ವಿಶೇಷ ಕಳಕಳಿ, ಒಲವು, ಹೃದಯಹೀನ ಸಮಾಜಕ್ಕೆ ಶಸ್ತ್ರಕ್ರಿಯೆ ನಡೆಸಬೇಕೆಂಬ ನಿಲುವು ಸುವ್ಯಕ್ತವಾಗಿದೆ. ಅವರ 'ವಿಚಾರವಾಹಿನಿ' ಹಾಗೂ 'ನೀಳ್ಗೀತೆಗಳು' ಎಂಬ ಕೃತಿಗಳು ಮೇಲಿನ ಮಾತುಗಳಿಗೆ ನಿದರ್ಶನವಾಗಿವೆ.

ನವೋದಯ-ನವ್ಯಗಳೆರಡೂ ಪಂಥಗಳಲ್ಲಿ ಕ್ರಮಿಸುತ್ತಾ ಬಂದ 'ದೊರಂಗೌ' ಅವರು ಶ್ರೇಷ್ಠ ಕವನಸಂಕಲನಗಳನ್ನು ಹೊರತಂದಿದ್ದಾರೆ. ಅವರು ವಿದ್ಯಾರ್ಥಿ ದಿಸೆಯಲ್ಲಿದ್ದಾಗ... 'ಜಗಲಿ ಹತ್ತಿ ಇಳಿದು' ಎಂಬ ನವ್ಯ ಕವಿತಾ ಸಂಕಲನವನ್ನು ಹೊರತಂದಿದ್ದು ನಮಗೆಲ್ಲ ವಿಸ್ಮಯದ ಸಂಗತಿಯಾಗಿತ್ತು; ಅತೀವ ಆನಂದದ ಕ್ಷಣವಾಗಿತ್ತು. 'ಉಲ್ಲಾಳ್ ಪಾರಿತೋಷಕ' ನಾಟಕ ಸ್ಪರ್ಧೆಯ ವಿಮರ್ಶೆ (ಪ್ರಜಾವಾಣಿಯಲ್ಲಿ ಪ್ರಕಟವಾಗಿತ್ತು). ಇವರು ಮುಂದೆ ದೊಡ್ಡ ಕವಿಯಾಗುತ್ತಾರೆ, ವಿಮರ್ಶಕರಾಗುತ್ತಾರೆ ಎಂದು ಸೂಚನೆ ನೀಡಿತ್ತು. ಅದು ಇಂದು ನಿಜವಾಗಿದೆ. 'ದೊರಂಗೌ' ಅವರ ಸಮಾಜ ಸೇವೆ, ಸಾಹಿತ್ಯದ ಅನನ್ಯತೆ, ಚಲನಚಿತ್ರಗೀತೆ ಮತ್ತು ಸಂಭಾಷಣಾ ರಚನೆ ಮುಂತಾದವನ್ನು ಗಮನಿಸಿ ಕರ್ನಾಟಕ ಸರ್ಕಾರ ಅತ್ಯುಚ್ಚ ಗೌರವವಾದ ವಿಧಾನ ಪರಿಷತ್ ಸದಸ್ಯರನ್ನಾಗಿ (MLC) ನಾಮಕರಣ ಮಾಡಿರುವುದು ಅವರ ಗೆಳೆಯನಾದ ನನಗೆ ತುಂಬ ಸಂತೋಷವನ್ನುಂಟುಮಾಡಿದೆ.

'ದೊರಂಗೌ' ಅವರು 'ಕಾಡು ಕಣಿವೆ ಕಡಲು', 'ಮಾವು-ಬೇವು', 'ಆಲ ಬೇಲ', 'ಕಣ್ಣು ನಾಲಗೆ ಕಡಲು', 'ಮೌನ ಸ್ಪಂದನ' ಎಂಬಿವೇ ಮುಂತಾದ ಕವನ ಸಂಕಲನಗಳನ್ನೂ, 'ಗೀತ ಗಾರುಡಿ', 'ಹೋಳಿ ಹುಣ್ಣಿಮೆ', 'ಪ್ರೇಮಾಂಜಲಿ', 'ಕಾವ್ಯ ಕಲ್ಯಾಣಿ', 'ಗೀತ ಗಂಗೋತ್ರಿ' ಎಂಬಿವೇ ಮುಂತಾದ ಭಾವಗೀತೆಗಳ ಸಂಕಲನಗಳನ್ನೂ, 'ಪ್ರೀತಿ ಪ್ರಗಾಥ', 'ಹಳ್ಳಿ ಹುಡುಗಿ', 'ಹಾಡು ಪಾಡು' ಎಂಬಿವೇ ಮುಂತಾದ ಪ್ರಗಾಥ ಕೃತಿಗಳನ್ನೂ, 'ಸಾಹಿತ್ಯ ಸರಸ್ವತಿ', ನವ್ಯ ನಿಕಷ', 'ಆಕೃತಿ' ಮತ್ತು 'ಅನುಸಂಧಾನ', 'ಹೊಸ ಓದಿನ ಬೆಳಕಲ್ಲಿ', 'ಜೀವಂತ ಜಾನಪದ', 'ಅಭಿನವ ವಾಲ್ಮೀಕಿ' ಎಂಬಿವೇ ಮುಂತಾದ ವಿಮರ್ಶಾ ಕೃತಿಗಳನ್ನೂ, 'ಕನ್ನಡ ನವೋದಯ ಕಾವ್ಯ: ಒಂದು ಪುನರ್ ಮೌಲ್ಯ ಮಾಪನ' ಎಂಬ ಪಿಎಚ್‌ಡಿ ಮಹಾಪ್ರಬಂಧವನ್ನೂ, 'ಮಣ್ಣಿನ ಮಾತುಗಳು' (ಚೌಪದಿ), 'ಮಿಂಚಿನ ಗೊಂಚಲು', ಎಂಬಿವೇ ಮುಂತಾದ ಮುಕ್ತಕ ಸಂಕಲನಗಳನ್ನೂ, 'ವಿಚಾರ ವಾಹಿನಿ',

ಎಂಬಿವೇ ಮುಂತಾದ ಗದ್ಯ ಕೃತಿಗಳನ್ನೂ, 'ಮಾವು ಬೇವು', 'ತಂಗಾಳಿ', 'ಪ್ರೇಮ ಪಯಣ', 'ಹೋಳಿ ಹುಣ್ಣಿಮೆ', 'ಗೀತ ವೈಭವ', 'ಪ್ರಾಯ ಮೂಢ್ಯತೆ', 'ಸೋಬಾನೆ ಸೋಬಾನೆ', 'ಪ್ರೀತಿ ಹಕ್ಕಿ', 'ಕಾವ್ಯಾಂಜಲಿ', 'ಸ್ನೇಹ ಸಂಪದ' ಎಂಬಿವೇ ಮುಂತಾದ ಹದಿನಾರು 'ಧ್ವನಿ ಸುರುಳಿಗಳನ್ನೂ ಹೊರತಂದಿದ್ದಾರೆ. ಇನ್ನೂರು ಕನ್ನಡ ಚಲನಚಿತ್ರಗಳಿಗೆ ಗೀತೆ, ಹತ್ತು ಕನ್ನಡ ಚಲನಚಿತ್ರಗಳಿಗೆ ಸಂಭಾಷಣೆ, ದೂರದರ್ಶನದ ಎಪ್ಪತ್ತು ಧಾರಾವಾಹಿಗಳಿಗೆ 'ಶೀರ್ಷಿಕೆಗೀತೆ'ಗಳನ್ನು ರಚಿಸಿ ದಾಖಲೆಯನ್ನು ನಿರ್ಮಿಸಿದ್ದಾರೆ; ಹೆಸರುವಾಸಿಯಾಗಿದ್ದಾರೆ. 'ಹತ್ತು ಗೀತೆಗಳನ್ನು ಸ್ವತಃ ಗೌಡರೇ ಸುಶ್ರಾವ್ಯವಾಗಿ ಹಾಡಿದ್ದಾರೆ. ಎರಡು ಸಾಂದ್ರಿಕೆಗಳಿಗೆ ಸಂಗೀತವನ್ನು ನೀಡಿದ್ದಾರೆ. ಮೂರು ಚಲನಚಿತ್ರಗಳಲ್ಲಿ ಅಭಿನಯವನ್ನೂ ನೀಡಿದ್ದಾರೆ. ಗೆಂಡೆತಿಮ್ಮನ ಚಲನಚಿತ್ರಗೀತೆಗಳು ಕರ್ನಾಟಕದ ಸಮಸ್ತ ಜನತೆಯ ಹೃದಯವನ್ನು ಕದ್ದಿವೆ, ಗೆದ್ದಿವೆ. ಗೌಡರು ಹಿರಿಯ ಕವಿಗಳೂ ಹೌದು, ಜನಪ್ರಿಯ ಕವಿಗಳೂ ಹೌದು. ನಾಲ್ಕು ಬಾರಿ ಅತ್ಯುತ್ತಮ ಗೀತರಚನಕಾರ ಪ್ರಶಸ್ತಿಯನ್ನು ಪಡೆದ ಗೌಡರು ಆ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆ ಮಾಡಿದ್ದಾರೆ.

ಅಮೆರಿಕಾ, ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್, ಆಸ್ಟ್ರೆಲಿಯಾ, ನ್ಯೂಝಿಲ್ಯಾಂಡ್, ಈಜಿಪ್ಟ್, ಇಸ್ರೇಲ್ ಮುಂತಾದ ದೇಶಗಳ ಪ್ರವಾಸ ಮಾಡಿರುವ 'ಗೌಡರು' ಸೊಗಸಾದ ಪ್ರವಾಸ ಸಾಹಿತ್ಯವನ್ನು ರಚಿಸಿದ್ದಾರೆ. ಎಂಟನೇ ತರಗತಿಯಲ್ಲಿದ್ದಾಗ ಅವರ ಅಧ್ಯಾಪಕರು 'ನಿಮಗೆ ತೋಚಿದ್ದನ್ನು ಏನಾದರೂ ಬರೆಯಿರಿ' ಎಂದಾಗ ಗೌಡರು 'ಅಪ್ಪಾಜಿಯ ತೀರ್ಪು' ಎಂಬ ಕಥೆಯನ್ನು ಬರೆದರು. ಅದು ಅವರ ಶಾಲೆಯ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾದದ್ದನ್ನು ಗೌಡರು ಸ್ಮರಿಸಿಕೊಂಡಾಗ ನನಗೆ ತುಂಬ ಸಂತೋಷವಾಗುತ್ತದೆ; ಅದು ಅವರ ಮೊದಲ ಬರೆಹ. ಆಕಾಶವಾಣಿಯಲ್ಲಿ ಮೊದಲ ಬಾರಿಗೆ ಅವರ ಕವಿತೆ ಪ್ರಸಾರವಾಗುತ್ತದೆ ಎಂದು ತಿಳಿಯಿತು; ರೇಡಿಯೋ ಇದ್ದರೆ ತಾನೆ ಅವರ ಮನೆಯಲ್ಲಿ ಕೇಳಲು! ಅದನ್ನು ಕೇಳಲು ಸ್ನೇಹಿತರೊಡನೆ One by two tea ಕುಡಿಯುವ ನೆಪವೊಡ್ಡಿ ಹೋಟೆಲ್ ಮಾಲೀಕನಿಗೆ ಸ್ವಲ್ಪ ರೇಡಿಯೋ ಹಾಕಿ, ಒಂದು ಹಾಡು ಕೇಳಬೇಕು ಎಂದು ಕೋರಿದರು. ಹಾಡು ಕೇಳಿ ಸಂತೋಷಪಟ್ಟರು. ಬಡತನದ ಬೇಗೆಯಿಂದ ಬೆಂದು ಸ್ವಂತ ಶಕ್ತಿಯಿಂದ ದೊಡ್ಡವರಾದ 'ದೊರಂಗೌ' ಅವರಂಥ ಸ್ನೇಹಿತರನ್ನು ಪಡೆದದ್ದು ನನ್ನ ಸೌಭಾಗ್ಯವೆಂದು ಭಾವಿಸಿ ಅವರ 'ನೀಳ್ಗೀತೆಗಳು' ಎಂಬ ಕವನ ಸಂಕಲನದಲ್ಲಿರುವ 'ಪೃಥ್ವಿ ಪ್ರಗಾಥ' ಎಂಬ ಕವಿತೆಯನ್ನು ಕುರಿತು ಕೆಲವು ಮಾತುಗಳನ್ನು ಬರೆಯಲು ಇಚ್ಛಿಸುತ್ತೇನೆ. ಈ ಸಂಕಲನದಲ್ಲಿ ಅರವತ್ತ ನಾಲ್ಕು ದೀರ್ಘ ಕವನಗಳಿವೆ; ಒಂದೂ ಕಾಲು ಪುಟದಿಂದ ಹಿಡಿದು ಹದಿನೈದು ಪುಟಗಳವರೆಗಿನ ವಿಸ್ತಾರವನ್ನು ಬಳಗೊಂಡಿವೆ.

'ಹೊಸಗನ್ನಡ' ಭಾವಗೀತೆಯಲ್ಲಿ 'ಪ್ರಗಾಥ' ಒಂದು ಪ್ರಕಾರ. ಇಂಗ್ಲಿಷಿನ 'ode', ಎಂಬ ಶಬ್ದದ ಸಂವಾದಿ ಶಬ್ದ ಪ್ರಗಾಥ. ಭಾವಗೀತೆಗಿಂತ ಸ್ವಲ್ಪ ವಿಸ್ತಾರವೂ (ಇದನ್ನು 'ಗೌಡರು' ನೀಳ್ಗವಿತೆ ಎಂದೂ ಕರೆದಿದ್ದಾರೆ), ಸಂಬೋಧನೆಯನ್ನೊಳಗೊಂಡದ್ದೂ,

ಗಂಭೀರವಾದ ಭಾವವನ್ನುಳ್ಳದ್ದೂ, ಸಂಕೀರ್ಣವೂ, ಉದಾತ್ತವಾದ ರೀತಿಯಿಂದ ಕೂಡಿದ್ದೂ ಆದ ವಿಶೇಷ ಪ್ರಕಾರವಿದು. ಗ್ರೀಕ್‌ನ ಪಿಂಡಾರ್ ಕವಿ ಮತ್ತು ಲ್ಯಾಟಿನ್ನಿನ ಹೊರೇಸನ ಪ್ರಗಾಥಗಳು ಪ್ರಾರಂಭ ಕಾಲದವು ; ಕೀಟ್ಸ್ ಕವಿಯ Nightingale, Grecion urn, ಮಿಲ್ಟನ್ ಕವಿಯ on the morning of Christ Nativity, ಡ್ರೈಡನ್ನಿನ Alexender Feast, ವರ್ಡ್ಸ್‌ವರ್ತ್ ಕವಿಯ Intirnations of Immortality, ಕುವೆಂಪು ಅವರ 'ಗಣೇಶ ಗಾಥಾ', ಬಿ.ಎಂ.ಶ್ರೀಕಂಠಯ್ಯನವರ 'ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ', 'ಸ್ವಾತಂತ್ರ್ಯೋದಯ ಪ್ರಗಾಥ' ಇವು ಪ್ರಗಾಥ ಪ್ರಕಾರಕ್ಕೆ ಶ್ರೇಷ್ಠ ನಿದರ್ಶನವಾಗಿವೆ.

ಹೆಸರಾಂತ ಕನ್ನಡದ ವಿಮರ್ಶಕರಾದ ಡಾ. ಜಿ. ಕೃಷ್ಣಪ್ಪನವರ ಮಾತುಗಳಲ್ಲಿ ಹೇಳುವುದಾದಾರೆ (ಮುನ್ನುಡಿಯ ತೋರಣದಲ್ಲಿ) 'ಗೌಡರು' ತುಮಕೂರಿನ ದೇಸಿ ಬೆಡಗನ್ನು ಮಾರ್ಗಕ್ಕೆ ಬೆಸೆಯುತ್ತ ಬಂದು ಹೊಸ ಚೈತನ್ಯವನ್ನು ಕನ್ನಡ ಕಾವ್ಯಕ್ಕೆ ನೀಡಿದ್ದಾರೆ; ಅವರ ಕಾವ್ಯ ಬಾಲ್ಯದ ಮುಗ್ಧ ಹಳ್ಳಿಯ ಬಾಲಕನ ಕುತೂಹಲದ ಕಣ್ಣಿಂದ ಎಲ್ಲವನ್ನೂ ನೋಡುತ್ತಾ ಜನಪದ ನುಡಿಯಲ್ಲಿ ಪ್ರಕೃತಿಯನ್ನು ಕಂಗೊಳಿಸಿದೆ; ಶ್ರೀ ಸಾಮಾನ್ಯನ ಬಾಳ ಲಹರಿಗೆ ಹತ್ತಿರದ ಗೀತ ಸಂಗೀತವಾಗಿದೆ.

'ಗೊಬ್ಬರ ತುಂಬಿದ ಕೈ ಬರೆದ ಮಣ್ಣಿನ ಹಾಡು ನನ್ನದು, ಸಗಣಿ ಮೆತ್ತಿದ ಬೆರಳು ಹಿಡಿದ ಗ್ರಾಮೀಣ ಲೇಖನಿ ನನ್ನದು' ಎಂಬ ಗೌಡರ ಸರಳ ಮಾತುಗಳು ವಿಶಿಷ್ಟಾರ್ಥವನ್ನು ಧ್ವನಿಸುತ್ತವೆ. ಜನಮನದ ನೋವನ್ನು, ಕಾವ್ಯ ಮಾಡಿದ ಕವಿ 'ದೊರಂಗೌ' ಅವರು ಕುವೆಂಪು, ದ.ರಾ. ಬೇಂದ್ರೆ ಮತ್ತು ಕೆ.ಎಸ್. ನರಸಿಂಹಸ್ವಾಮಿಗಳ ಪ್ರಭಾವಕ್ಕೊಳಗಾಗಿ ಅರ್ತಿಯಿಂದ ಒಲವಿನ ಆರಾಧಕರಾಗಿ ಜನಮನದ ಕವಿಯಾಗಿರುವುದು ಹೆಮ್ಮೆಯ ವಿಚಾರವಾಗಿದೆ. ಈ ಕವಿ ನಿರಾಶ್ರಿತರ, ಭಿಕ್ಷುಕರ, ದೀನದಲಿತರ, ಕೃಷಿಕಾರ್ಮಿಕರ ನೋವನ್ನು, ಕಾವ್ಯವಾಗಿಸಿ ಪ್ರೀತಿಯ ಸೆಲೆಯನ್ನು, ಪ್ರಗಾಥವಾಗಿ ನೀಡಲು ಸಾಧ್ಯವಾಗಿದೆ.

'ನೀಳ್ಗೀತೆಗಳು' ಎಂಬ ಕವನ ಸಂಕಲನದಲ್ಲಿ 'ಚಂಡಮಾರುತಗಾಥ', ಪೆಡಂಭೂತ', 'ಪಕ್ಷಿ ಪ್ರಗಾಥ', 'ಪ್ರಳಯ ಪ್ರಗಾಥ', 'ಪ್ರಭಾ ಪ್ರಗಾಥ', 'ಚೈತ್ರ ಪ್ರಗಾಥ', 'ದಣಿ ಪುರಾಣ: ಒಂದು ಗ್ರಾಮೀಣ ಗಾಥ;' 'ಚರಿತ್ರಾರ್ಹ ಚಾವಡಿ ಕಟ್ಟೆಗೆ' (ಒಂದು ನ್ಯಾಯ ಪ್ರಗಾಥ), 'ಕಣದ ಕವನ' (ಒಂದು ಗ್ರಾಮೀಣ ಪ್ರಗಾಥ), 'ನಾಯಕನಿವನು ನಮ್ಮವನಯ್ಯ', 'ಸಾಲ್ಮರದ ನೀಳ್ಗೀತೆ' ಮುಂತಾದ ಪ್ರಗಾಥಗಳು, ಪ್ರಕೃತಿ ವಿಕೋಪದ ಅನಾಹುತಗಳು, ಗಣಿಗಾರಿಕೆಯ ತಾಂಡವ ನೃತ್ಯ, ಅನಾವೃಷ್ಟಿ, ಅತಿವೃಷ್ಟಿಯ ಭೀಕರತೆ, ಸೂರ್ಯ ಪ್ರಭೆಯ ಪ್ರಯೋಜನಗಳು, ಚೈತ್ರ ಮಾಸ ಬಂದಾಗ ಪ್ರಕೃತಿಯಲ್ಲಾಗುವ ರಂಗುರಂಗಿನ ಮನೋಲ್ಲಾಸದ ಪರಿವರ್ತನೆ, ಹಳ್ಳಿಗಳಲ್ಲಿ ನ್ಯಾಯ ತೀರ್ಮಾನ ನಡೆಯುತ್ತಿದ್ದುದರ ಮಾದರಿ, ವಿಧಾನ; ಸುಗ್ಗಿಯ ಕಾಲದ ರೈತರ ಸಂಭ್ರಮ, ಭ್ರಷ್ಟಾಚಾರದ ರಾಜಕಾರಣಿಗಳ ಸಂಗತಿ, ಕೆಂಪು ತೋಟ (ಲಾಲ್ ಬಾಗ್)ದ ಸಾಲುಮರಗಳ ಸೊಬಗು, ಗುಲ್ ಮೊಹರ್ ಮರಗಳ ಪುಷ್ಪ ಶೃಂಗಾರ, ಪ್ರಕೃತಿ ಹಿಂಸೆಯಂಥ ವಿಚಾರಗಳನ್ನು ಕಣ್ಣಿಗೆ

ಕಟ್ಟುವಂತೆ, ಹೃದಯಕ್ಕೆ ನಾಟುವಂತೆ ಚಿತ್ರಿಸುತ್ತವೆ; ವಿಷಯ ವೈವಿಧ್ಯ, ಗ್ರಾಮೀಣ ಬದುಕಿನ ಚಿತ್ರಗಳು, ಕಣ್ಣುಕುಕ್ಕುವಂತೆ ಚಿತ್ರಣಗೊಂಡಿವೆ.

'ಪೃಥ್ವಿ ಪ್ರಗಾಥ' ನಾಲ್ಕು ಪುಟಗಳ ಹರಹಿನಲ್ಲಿ ತೊಂಬತ್ತೈದು ಸಾಲುಗಳನ್ನೊಳಗೊಂಡಿದೆ. ಮನುಕುಲ ಪಕ್ಷಿಪ್ರಾಣಿ ಸಂಕುಲಕ್ಕೆ ಜೀವದಾನ ಮಾಡುತ್ತಿರುವ (ಆಹಾರ, ಗಾಳಿ, ನೀರು, ಬೆಳಕು, ಹೂ-ಹಣ್ಣು, ಗಿಡಲತೆಮರ) ಪ್ರಕೃತಿಯನ್ನು ಭೂತಾಯಿಯನ್ನು ಮಾನವ ಹಿಂಸಿಸುತ್ತಿದ್ದಾನೆ; ಕೊಲ್ಲುತ್ತಿದ್ದಾನೆ; ಹಗಲು ದರೋಡೆ ಮಾಡುತ್ತಿದ್ದಾನೆ; ಇದು ಅನ್ಯಾಯ ಎಂದು ಕವಿ 'ದೊರಂಗೌ' ಕೊರಗುತ್ತಾರೆ, ಏಕೆ ಹೀಗಾಗುತ್ತದೆ ಎಂದು ಪ್ರಶ್ನಿಸುತ್ತಾರೆ, ವಿಸ್ಮಯಕ್ಕೀಡಾಗುತ್ತಾರೆ! 'ಪರಿಸರ ಪ್ರೇಮ ಮತ್ತು ಪ್ರಕೃತಿಯನ್ನು ರಕ್ಷಿಸಬೇಕಾದ ಅಗತ್ಯವನ್ನು, ಹೃದಯಂಗಮವಾಗಿ ಚಿತ್ರಿಸುತ್ತಾರೆ. ಕವಿತೆಯುದ್ದಕ್ಕೂ ಅಲ್ಲಲ್ಲಿ ಬಂದಿರುವ ಆಂತರಿಕ ಪ್ರಾಸ ಹಾಗೂ ಅಂತ್ಯ ಪ್ರಾಸ ಕವಿತೆಯ ಸೊಗಸನ್ನು ಹೆಚ್ಚಿಸಿದೆ; ಯಾಂತ್ರಿಕವಾಗಿ ಬರದೆ ಅನಾಯಾಸವಾಗಿ ಬಂದಿರುವ ಈ ಪ್ರಾಸಗಳು ಅರ್ಥವಂತಿಕೆಯನ್ನೂ ಕವಿಯ ಅಂತರಾಳದ ನೋವನ್ನೂ ವ್ಯಕ್ತಪಡಿಸುತ್ತವೆ. ಕವಿತೆಯ ಪ್ರಾರಂಭದ ಸಾಲುಗಳನ್ನು ಗಮನಿಸಿದರೆ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ.

"ಹೆಬ್ಬನವು ನಲ್ಮೆ ಕಬ್ಬಿಗನ ಜೊತೆಗೆ
ಸಂವಾದ ಮಾಡುತ್ತಿತ್ತು;
ತಬ್ಬಿಬ್ಬಾದ ಕಬ್ಬಿಗನ ಹೃದಯ
ಅಬ್ಬರಿಸಿ ಮೊರೆಯುತ್ತಿತ್ತು!
ಅಂದಿನೆನ್ನ ಒಡಲು ಹೂ ಹಸಿರ ಮಡಿಲು
ಇಂದೇಕೆ ಬರಡು ಹೀಗೆ ?
ಕಬ್ಬಿಣದ ಮನುಜ ತಾಯಿಯ ಮರೆತನೇಕೆ ?
ಬೀಳಾಯಿತೇಕೆ ವನವು ?" (ಪುಟ : ೧೨)

'ಹೆಬ್ಬನ-ಕಬ್ಬಿಗ, ತಬ್ಬಿಬ್ಬು-ಕಬ್ಬಿಗ, ಅಬ್ಬರಿಸು, ಒಡಲು-ಮಡಿಲು, ಕಬ್ಬಿಣ, ಮೂಡುತ್ತಿತ್ತು, ಮೊರೆಯುತ್ತಿತ್ತು ಎಂಬ ಶಬ್ದಗಳನ್ನು ಪರಿಭಾವಿಸಬೇಕು. ತಬ್ಬಿಬ್ಬು, ಅಬ್ಬರಿಸು, ಮೊರೆ ಎಂಬ ಶಬ್ದಗಳು ಕವಿಯ ಮನೋಭಾವಗಳನ್ನೂ (ವಿಸ್ಮಯ, ನೋವು, ಕ್ರೋಧ, ಬೇಡಿಕೆ) ಸೂಚಿಸುತ್ತವೆ. ಮನುಷ್ಯ ಸ್ವಾರ್ಥದೃಷ್ಟಿಯಿಂದ ಭೂಮಿತಾಯಿಯನ್ನು ಕೊಲ್ಲುತ್ತಿದ್ದಾನೆ, ಹಿಂಸಿಸುತ್ತಿದ್ದಾನೆ. ಮರಗಿಡಗಳನ್ನು ಕಡಿದು ನೆಲಸಮಮಾಡಿ ನಿವೇಶನಗಳನ್ನೂ ಕಾರ್ಖಾನೆಗಳನ್ನೂ ನಿರ್ಮಿಸುತ್ತಿದ್ದಾನೆ, ಕೃಷಿಯನ್ನು ತಿರಸ್ಕರಿಸುತ್ತಿದ್ದಾನೆ. ಮುಂದೆ ಮನುಷ್ಯ ಆಹಾರಕ್ಕಾಗಿ, ನೀರಿಗಾಗಿ ಹಾಹಾಕಾರ ಪಡಲೇಬೇಕಾಗುತ್ತದೆ ಎಂಬ ಸೂಚ್ಯಾರ್ಥ ಇಲ್ಲಿನ ಶಬ್ದ ಶಬ್ದಗಳಲ್ಲಿ ಗುನುಗುನಿಸುತ್ತಿದೆ.

'ಹೆಬ್ಬನ' ಕವಿಯನ್ನು ಪ್ರಶ್ನಿಸುವ, ಸಂವಾದ ಮಾಡುವ ರೀತಿಯ ನವೀನ ತಂತ್ರವನ್ನು ಬಳಸಿಕೊಂಡಿರುವುದು ಸಹಜವಾಗಿದೆ; ಔಚಿತ್ಯಪೂರ್ಣವಾಗಿದೆ. ಪ್ರಾಚೀನ ಕಾಲದಲ್ಲಿ ಹಸಿರು ಹೂ ಹಣ್ಣಿಂದ ಕಂಗೊಳಿಸುತ್ತಿದ್ದ ನಾನು ಇಂದು ಬರಡಾಗಲು ಕಾರಣವೇನು?

ತಾಯಿಯನ್ನು ಮರೆತ ಕಬ್ಬಿಣದ ಹೃದಯವುಳ್ಳ ಮನುಜನೆ ಇದಕ್ಕೆ ಕಾರಣ. ಭೂ ಬನ ಮರುಭೂಮಿಯಾಗುತ್ತಿದೆ; ಹಣ ವ್ಯಾಮೋಹಿ, ದಾಹದಾಸ ಮಾನವನ ಹೀನ ಕೃತ್ಯಕ್ಕೆ ಕೊನೆಯಿಲ್ಲ. ಕವಿ ಮಮ್ಮಲ ಮರುಗುತ್ತಿದ್ದಾರೆ, 'ಬನ', 'ಕಣ್ಣೀರು' ಸುರಿಸುತ್ತಿದೆ. ತಂಗಾಳಿ, ಪುಷ್ಪಗಳ ಪರಿಮಳ ಎಲ್ಲಿ ಹೋಯಿತು ? ಹಕ್ಕಿಗಳ ಇಂಚರವೂ ಇಲ್ಲ, ಚಿಗುರೂ ಇಲ್ಲ, ಚಿಟ್ಟೆಗಳೂ ಇಲ್ಲ. ಇದನ್ನು ಸ್ಮರಿಸಿಕೊಂಡ ಕವಿಮನಕ್ಕೆ ಅತೀವ ದಿಗಿಲಾಗುತ್ತದೆ. ಕವಿ ಇಲ್ಲಿ ಬಳಸಿರುವ – ಮರುಭೂಮಿ, ಸುಡುಗಾಡು (ಸ್ಮಶಾನ) ಕಬ್ಬಿಣದ ಮನುಷ್ಯ, ಕೊಡಲಿ ದಾಸ, ದಾಹ, ರಾಕ್ಷಸ, ಗರಗಸ, ಬೆಂಗಾಡು, ಕಂಸಾಸುರ, ಹೆಮ್ಮಾರಿ, ಕೊಳ್ಳೆ, ಲೂಟಿ, ದುರಾಸೆ, ನಿಟ್ಟುಸಿರು, ಸ್ವಾರ್ಥ ಎಂಬಿವೇ ಮುಂತಾದ ಶಬ್ದಗಳು ನಮ್ಮ ಸುತ್ತಲಿನ 'ಬನ'ಗಳನ್ನೂ, ಪ್ರಕೃತಿಯ ಪರಿಸರವನ್ನೂ ಮನುಷ್ಯ ಹೇಗೆ ನಿರ್ನಾಮ ಮಾಡುತ್ತಿದ್ದಾನೆ ಎಂಬುದನ್ನು ಸೂಚಿಸುತ್ತವೆ.

'ಅತ್ತ ಚಿಗುರೂ ಇಲ್ಲ; ಇತ್ತ ಕದಿರೂ ಇಲ್ಲ
ಮರುಭೂಮಿಯಾಯ್ತೆ ಬನವು ?' (ಪುಟ : ೧೨)

ಎಂಬ ಸಾಲುಗಳು ಕವಿಮನದ ಅಳಲು, ಅಸಮಾಧಾನ, ಬೇಸರವನ್ನು ಸೂಚಿಸುತ್ತವೆ. 'ರೂ' ವರ್ಣದಲ್ಲಿರುವ 'ಊ'ಎಂಬ ದೀರ್ಘಸ್ವರ ಮತ್ತು ಪ್ರಶ್ನಾರ್ಥಕ ಚಿಹ್ನೆ ಅರ್ಥಪೂರ್ಣವಾಗಿವೆ!

ಮನುಷ್ಯ ಕಲ್ಲುಹೃದಯಿಯಾಗಿದ್ದಾನೆ. ದುರಾಸೆಯ ದುಷ್ಟಮದದಲ್ಲಿ ದುಮುದುಮು ಉರಿಯುತ್ತಿದ್ದಾನೆ ! ಮರ ಗಿಡಗಳನ್ನು ಕಡಿದು ಬೆಟ್ಟಗುಡ್ಡಗಳನ್ನು ಸಮ ಮಾಡಿ ಮಹಲ ಮೇಲೆ ಮಹಲು ಕಟ್ಟುತ್ತಿದ್ದಾನೆ ! ಇಷ್ಟೆಲ್ಲ ಆದ ಮೇಲೆ ಪಶು ಪಕ್ಷಿ ಪ್ರಾಣಿಗಳಿಗೆ ಆಸರೆ ಎಲ್ಲಿದೆ ?

'ಇಲ್ಲಿ ತರು ತೇರಿತ್ತು' ಎಂಬ ಸಾಲಿನಲ್ಲಿರುವ 'ತರುತೇರು' ಎಂಬ ಶಬ್ದ ಗುಚ್ಛ ಮರಗಿಡಗಳು ದಟ್ಟವಾಗಿದ್ದ ಕಾಡುಗಳನ್ನು ಸೂಚಿಸುತ್ತದೆ. 'ನವಿಲಿನ ಕುಣಿತವೂ ಇಲ್ಲ ತಂಪೂ ಇಲ್ಲ, ಕಂಪೂ ಇಲ್ಲ; ಮಳೆಯೂ ಇಲ್ಲ, ಬೇಳೆಯೂ ಇಲ್ಲ ! ಇಲ್ಲಿನ ದೀರ್ಘಸ್ವರ 'ಊ' ನೋವು, ನಿರಾಶೆಗಳ ಪ್ರತಿರೂಪವಾಗಿದೆ. ಈಗ ಎಲ್ಲೂ ಬೆರಗಿಲ್ಲ; ಸೌಂದರ್ಯವೂ ಇಲ್ಲ; ಎಲ್ಲ ಕಡೆ 'ರಾಕ್ಷಸ ನೃತ್ಯ'! ಈ ಕವಿತೆಯಲ್ಲಿ 'ಊ' ಎಂಬಹ ದೀರ್ಘಸ್ವರ ಹದಿನೈದು ಕಡೆ ಬಂದಿದೆ. ಕಾಡಿನ ಮಡಿಲು ಬೆಂಗಾಡಾಗಿದ್ದರಿಂದಲೇ ತೇನೆ. ಗಿಣಿ. ಕೋಗಿಲೆ, ಲಾವುಗೆ ಇಲ್ಲ! ಎಲ್ಲಿ ನೋಡಿದರೂ 'ಇಲ್ಲಗಳ' ಸುರಿಮಳೆ! ಎಂಥಮರ ದೃಷ್ಟ! ಕಂಸಾಸುರರಿಂದ 'ಪ್ರಕೃತಿಯಲ್ಲಿ ಇಂಥ ದುಸ್ಥಿತಿಯೊದಗಿದೆ! 'ಭೂತಾಯಿ' 'ಹೆಣ'ವಾದಂತೆ ಭಾಸವಾಗುತ್ತಿರುವುದು ಎಂಥ ವಿಪರ್ಯಾಸ!

ಭೂಮಿಯ ಮೇಲಿನ ಗಿಡಮರಗಳು ಹೋದರೆ ತಾಯಿಯ ಜೀವ ಹೋದಂತೆಯೇ! ಸೌಂದರ್ಯಾಂಶಗಳೆಲ್ಲಾ ಹೋದಮೇಲೆ ಭೂಮಿತಾಯಿ ಹೆಣಕ್ಕೆ ಸಮಾನವಲ್ಲವೇ ?

'ಚೆಂಡು ಹೂ ಇಲ್ಲ; ಗೊಂಡೆ ಹೂ ಇಲ್ಲ
ಪ್ಲಾಸ್ಟಿಕ್ಕೂ ಮನೆಯಲ್ಲೆಲ್ಲಾ !
ತುಂಬೆ ಹೂ ಇಲ್ಲ; ರೆಂಬೆ ಹೂ ಇಲ್ಲ
ಚಿತ್ರವಷ್ಟೇ ಗೋಡೆಯಲ್ಲೆಲ್ಲಾ !' (ಪುಟ : ೧೪)

ಮನುಷ್ಯನ ಕೃತಕ ಬದುಕಿನ ಚಿತ್ರವನ್ನು ಮೇಲಿನ ಸಾಲುಗಳು ಸಮರ್ಥವಾಗಿ ಧ್ವನಿಸುತ್ತವೆ.

'ಮನುಜ ಕಣಜವಾಗಿ ಸ್ವಾರ್ಥಗೂಡು ಕಟ್ಟಿ

ಪ್ರಕೃತಿಯ ಒಡಲೂ ಬರಿದು!

ವಿಕೃತಿಯ ಕಂಡ ಸ್ವಾರ್ಥಿ ಮಣ್ಣ ಮನುಜ

ನಿಸರ್ಗ ಚಿತ್ರ ಮಾತ್ರ ಬರೆದು' (ಪುಟ : ೧೫)

ಸಹಜ ಸುಂದರ ಸುಗಂಧ ಭರಿತ ಆಹ್ಲಾದಕರ ಇಂಚರದ ದೃಶ್ಯಗಳೆಲ್ಲೂ ಇಲ್ಲ. 'ನಿಸರ್ಗ', 'ಹೆಬ್ಬನ' 'ಹೀಗಿತ್ತು', 'ಹಾಗಿತ್ತು' ಚಿತ್ರ ಬರೆದು ತೋರಿಸುತ್ತಿದ್ದಾನೆ ಸ್ವಾರ್ಥಿ ಮನುಷ್ಯ !

ಈ ಕವಿತೆಯಲ್ಲಿ ಮತ್ತೆ ಮತ್ತೆ ಬರುವ ದೀರ್ಘಸ್ವರಗಳು, ಆಂತರಿಕ ಪ್ರಾಸ, ಅಂತ್ಯಪ್ರಾಸ, ಪಾದಗಳ ಏರಿಳಿತ, ಆಶ್ಚರ್ಯ ಚಿಹ್ನೆ, ಪ್ರಶ್ನಾರ್ಥಕ ಚಿಹ್ನೆಗಳು ಜಿಗುಪ್ಸೆ, ಅತೃಪ್ತಿ, ಅಸಮಾಧಾನ, ವ್ಯಂಗ್ಯ, ವಿಸ್ಮಯ ಭಾವಗಳನ್ನೂ ಸೂಚಿಸುವ ಪರಿಯನ್ನು ಪರಿಭಾವಿಸಬೇಕು. ಹೊಸಗನ್ನಡದ ಶ್ರೇಷ್ಠ ಪ್ರಗಾಥಗಳಲ್ಲಿ 'ಪೃಥ್ವಿ ಪ್ರಗಾಥ'ವೂ ಒಂದು ಎಂದು ಹೇಳಿ ಹೆಮ್ಮೆಯಿಂದ ಹೇಳಬಹುದು. ಹಾಗೆ ನೋಡಿದರೆ 'ನೀಳ್ಗೀತೆಗಳು' ಎಂಬ ಕವನ ಸಂಕಲನವೇ 'ಶ್ರೇಷ್ಠ ಕವಿತೆಗಳ ಸಂಕಲನ'ವಾಗಿದೆ! ನನ್ನ ಮಿತ್ರರಾದ ಡಾ. ದೊಡ್ಡರಂಗೇಗೌಡ ಅವರು ಇಂಥ ಮೌಲಿಕವೂ, ಸುಂದರವೂ, ಶ್ರೇಷ್ಠವೂ, ಅರ್ಥಪೂರ್ಣವೂ ಆದ ಮತ್ತಷ್ಟು ಪ್ರಗಾಥಗಳನ್ನೂ ರಚಿಸಲಿ ಎಂದು ಹಾರೈಸುತ್ತೇನೆ.

■

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೧೦. ಕನ್ನಡ ನಾಟಕ ನಡೆದುಬಂದ ದಾರಿ ಮತ್ತು ವೃತ್ತಿರಂಗಭೂಮಿ

–ಕಾಂತರಾಜಪುರ ಸುರೇಶ್*

## (ಅ) ಪ್ರಾರಂಭ

ಕನ್ನಡ ನಾಟಕ ನಡೆದು ಬಂದ ದಾರಿಯ ಬಗ್ಗೆ ವಿಹಂಗಮ ದೃಷ್ಟಿ ಬೀರಿದಾಗ ಎರಡು ದೃಷ್ಟಿಗಳಿಂದ ಕನ್ನಡ ನಾಟಕದ ಇತಿಹಾಸವನ್ನು ಅವಲೋಕಿಸಿಬಹುದಾಗಿದೆ. ಮೊದಲನೆಯದಾಗಿ ನಾಟಕ ಸಾಹಿತ್ಯದ ಅವಲೋಕನ. ಎರಡನೆಯದಾಗಿ ಕನ್ನಡ ರಂಗಭೂಮಿ ಬೆಳವಣಿಗೆಯ ಇತಿಹಾಸದ ಅವಲೋಕನ. ಯಾವುದೇ ನಾಟಕ ಯಶಸ್ವಿಯಾಗಬೇಕಾದರೆ, ಸಾಹಿತ್ಯವಾಗಿ ಅದು ಮೊದಲು ಬರಹದಲ್ಲಿ ಮೂಡಬೇಕು. ಅನಂತರ ಅದು ರಂಗಪ್ರಯೋಗಕ್ಕೆ ಒಳಗಾಗಬೇಕು. ನಮ್ಮಲ್ಲಿ ಎಷ್ಟೋ ನಾಟಕಗಳು ರಂಗಪ್ರದರ್ಶನಕ್ಕೆ ಬಾರದೇ ಸಾಹಿತ್ಯವಾಗಿಯೇ ಉಳಿದಿವೆ.

ನಾಟಕ ಕೃತಿಯೊಂದು ಬರಹಗಾರನ ಮನಃಪಟಲದಲ್ಲಿ ಮೂಡಿ ನಾಟಕ ಕೃತಿಯಾಗಿ ಅನಂತರ ಸಾಹಿತ್ಯವಾಗಿ ಬರಹದಲ್ಲಿ ಕಾಣಿಸಿಕೊಂಡ ಮೇಲೆ ಅದನ್ನು ರಂಗವೇದಿಕೆಯಲ್ಲಿ ಪ್ರತಿಭಾವಂತ ಕಲಾವಿದರು ಪ್ರದರ್ಶನ ನೀಡಿದಾಗ ಅದರ ಸಾರ್ಥಕತೆಯನ್ನು ಕಾಣುತ್ತೇವೆ. ಕನ್ನಡ ನಾಟಕದ ಇತಿಹಾಸವನ್ನು ಕಂಡಾಗ ನಾಟಕಗಳು ರಂಗಪ್ರದರ್ಶನಕ್ಕಾಗಿಯೇ ರಚಿತವಾಗಿರುವುದನ್ನು ಕಾಣುತ್ತೇವೆ. ಶ್ರೀಕಂಠೇಶಗೌಡರು ನಾಟಕಗಳನ್ನು ರಚಿಸಿದವರು ಮತ್ತು ತಾವೇ ರಂಗಕ್ಕೆ ತಂದ ವಿಶಿಷ್ಟ ವ್ಯಕ್ತಿಗಳಾಗಿದ್ದಾರೆ. ಅನೇಕ ಸಂದರ್ಭಗಳಲ್ಲಿ ನಾಟಕ ರಚನಾಕಾರರು, ರಂಗಕಲಾವಿದರೂ ಆಗಿಲ್ಲದ ಸಂದರ್ಭಗಳು ಉಂಟು. ಆಧುನಿಕ ನಾಟಕ ಸಾಹಿತ್ಯದಲ್ಲಿ ಇದಕ್ಕೆ ವಿಪುಲ ನಿದರ್ಶನಗಳು ದೊರಕುತ್ತವೆ. ಶ್ರೀಕಂಠೇಶಗೌಡರ ನಾಟಕಗಳ ಅವಲೋಕನಕ್ಕೆ ಪೀಠಿಕೆಯಾಗಿ ಕನ್ನಡ ನಾಟಕ ನಡೆದು ಬಂದ ದಾರಿಯ ಸಂಕ್ಷಿಪ್ತಾವಲೋಕನ ಮಾಡುವುದು ಅಗತ್ಯವಿದೆ. ಕನ್ನಡ ರಂಗಭೂಮಿಯ

* ಕನ್ನಡ ಪ್ರಾಧ್ಯಾಪಕರು, # ೩೯೫, ೨ನೇ ಅಡ್ಡರಸ್ತೆ, ೨೯ನೇ ಮುಖ್ಯರಸ್ತೆ, ಬಿ.ಟಿ.ಎಂ. ಬಡಾವಣೆ ೨ನೇ ಹಂತ, ಬೆಂಗಳೂರು – ೫೬೦೦೭೬. ಮೊ: ೯೮೪೪೩೮೩೧೮೦.

ಇತಿಹಾಸವನ್ನು ಸಮಗ್ರವಾಗಿ ಗಮನಿಸಿದಾಗ ಡಾ॥ ಹೆಚ್.ಕೆ. ರಂಗನಾಥರು ಗುರುತಿಸಿರುವಂತೆ ನಾಲ್ಕು ಘಟ್ಟಗಳನ್ನು ಕಾಣಬಹುದಾಗಿದೆ.

೧. ಕ್ರಿ.ಶ. ೧೮೮೦ ರಿಂದ ಕ್ರಿ.ಶ. ೧೯೦೦ರವರೆಗೆ (ಪ್ರಯೋಗ ಹಾಗೂ ಸ್ಥಾಪನೆಯ ಕಾಲ)

೨. ಕ್ರಿ.ಶ. ೧೯೦೦ ರಿಂದ ಕ್ರಿ.ಶ. ೧೯೪೦ರವರೆಗೆ (ಏಳಿಗೆಯ ಸ್ವರ್ಣಯುಗ)

೩. ಕ್ರಿ.ಶ. ೧೯೪೦ರಿಂದ ಕ್ರಿ.ಶ. ೧೯೫೦ವರೆಗೆ (ಸ್ಪರ್ಧೆ ಹಾಗೂ ಕ್ಷೀಣತೆಯ ಕಾಲ)

೪. ಕ್ರಿ.ಶ. ೧೯೫೦ ರಿಂದ ಈಚೆಗೆ (ಸ್ವಾತಂತ್ರ್ಯಾನಂತರದ ಹೊಸ ಜೀವನ)

ಇಲ್ಲಿ ಶ್ರೀಕಂಠೇಶಗೌಡರ ಕಾಲದವರೆಗಿನ ಕನ್ನಡ ನಾಟಕದ ಇತಿಹಾಸವನ್ನು, ರಂಗಭೂಮಿ ಬೆಳವಣಿಗೆಯನ್ನು ಮತ್ತು ಶ್ರೀಕಂಠೇಶಗೌಡರ ಕಾಲದ ಕೆಲವು ಪ್ರಮುಖ ನಾಟಕ ಕಂಪನಿಗಳ ಇತಿಹಾಸವನ್ನು ಪ್ರಸ್ತಾಪಿಸಿದೆ.

**ಅ) ಕನ್ನಡದ ಮೊದಲ ನಾಟಕ**

"ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ನಾಟಕ' ಒಂದು ಸಾಹಿತ್ಯದ ಪ್ರಕಾರವಾಗಿದ್ದರೂ, ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾದ ಪ್ರಕಾರವಾಗಿದೆ. 'ನಾಟಕ' ಎಂಬ ಪದ ನಟನೆ/ನಟನ ಎಂಬ ಪದದಿಂದ ನಿಷ್ಪತ್ತಿಯಾಗಿದೆ. ನಾಟಕ ಎನ್ನವುದು ಒಂದು ಕ್ರಿಯೆಯ ಅನುಕರಣ". ಇಂತಹ ಅನುಕರಣ ಕ್ರಿಯೆಯಿಂದ ಹುಟ್ಟಿದ ನಾಟಕ ಪ್ರಕಾರವು ಸಾಹಿತ್ಯ ಪ್ರಕಾರದಲ್ಲೂ, ದೃಶ್ಯಮಾಧ್ಯಮ ಪ್ರಕಾರದಲ್ಲೂ ಪ್ರಮುಖ ಸ್ಥಾನಗಳಿಸಿದೆ. ಜನಪದ ರಂಗಭೂಮಿ ಮೂಲವಾಗಿದ್ದು, ಆಧುನಿಕ ಕನ್ನಡ ನಾಟಕ ಪ್ರಕಾರ ಸಂಸ್ಕೃತ ಮತ್ತು ಇಂಗ್ಲಿಷ್ ನಾಟಕಗಳಿಂದ ಪ್ರೇರಿತವಾದದ್ದು ಎಂಬುದು ಕನ್ನಡ ನಾಟಕಗಳ ಹುಟ್ಟು ಮತ್ತು ಇತಿಹಾಸವನ್ನು ಗಮನಿಸಿದಾಗ ತಿಳಿದು ಬರುತ್ತದೆ. ಕನ್ನಡ ನಾಟಕ ಪರಂಪರೆಯ ಇತಿಹಾಸವನ್ನು ಅವಲೋಕಿಸಿದಾಗ ಪ್ರಾಚೀನ ಕವಿಗಳು ಜನಪದ ರಂಗಭೂಮಿ ನಾಟಕಗಳನ್ನು ಏಕೆ ರಚಿಸಲಿಲ್ಲ ಎಂಬ ಸಂಗತಿ ಇನ್ನೂ ನಿಗೂಢವಾಗಿಯೇ ಇದೆ. ಆದರೆ ಚಾಲುಕ್ಯ ಮನೆತನದ ಇಮ್ಮಡಿ ಪುಲಿಕೇಶಿಯ ಸೊಸೆ ಚಂದ್ರಾದಿತ್ಯನ ಪತ್ನಿ (ಕ್ರಿ.ಶ. ೬೫೫-೬೫೯) ಬಿಜ್ಜಳ ರಾಣಿ (ವಿಜಯ ಮಹಾದೇವಿ) ಕೌಮುದೀ ಮಹೋತ್ಸವ ಎಂಬ ನಾಟಕವನ್ನು ಬರೆದಿರುವುದು ತಿಳಿದು ಬರುತ್ತದೆ. ಆದರೆ ಅದು ಸಂಸ್ಕೃತದಲ್ಲಿ ರಚಿತವಾಗಿದೆ. ನಾಟಕಗಳ ಪ್ರಾಚೀನತೆಯನ್ನು ಗುರುತಿಸಲು ಶಾಸನಗಳು, ಸಾಹಿತ್ಯಿಕೆ ಉಲ್ಲೇಖಗಳು, ಯಾತ್ರಿಕರ ಪ್ರವಾಸಗ್ರಂಥಗಳು, ಕಲೆ, ಶಿಲ್ಪ ಮೊದಲಾದವುಗಳು ಸಹಾಯವಾಗುತ್ತದೆ.

ಮೈಸೂರಿನ ಅರಸ ಚಿಕ್ಕದೇವರಾಜರ ಆಸ್ಥಾನದಲ್ಲಿದ್ದ ಸಿಂಗರಾರ್ಯನಿಂದ ರಚನೆಯಾದ 'ಮಿತ್ರವಿಂದಾ ಗೋವಿಂದ' (೧೬೮೦) ನಾಟಕವೇ ಕನ್ನಡದಲ್ಲಿ ಲಭ್ಯವಾಗಿರುವ ಪ್ರಥಮ

ನಾಟಕ. ಆದರೆ ಇದು ಸಂಸ್ಕೃತದ ಶ್ರೀಹರ್ಷನ ರತ್ನಾವಳೀ ನಾಟಕದ ರೂಪಾಂತರ. "ಇಲ್ಲಿಯ ಹಳಗನ್ನಡವು ಚಿಕ್ಕದೇವರಾಜನ ಕಾಲದಲ್ಲಿ ತಿರುಮಲಾರ್ಯ ಮೊದಲಾದ ಚಂಪೂಕವಿಗಳು ತಮ್ಮ ಕೃತಿಯಲ್ಲಿ ಬಳಸುತ್ತಿದ್ದ ಹೊಸ ಕಾಲದ ಭಾಷೆ ಶೈಲಿಗಳ ಧೋರಣೆಗೆ ಅನುಗುಣವಾದದ್ದು. ವಸ್ತು ಆ ಕವಿಗಳಿಗೆ ವಿಶೇಷವಾಗಿ ಪರಿಚಿತವೂ ಪ್ರಿಯವೂ ಆಗಿದ್ದ ಭಾಗವತ ವಿಷ್ಣು ಪುರಾಣಗಳಂತಹ ಗ್ರಂಥಗಳಲ್ಲಿ ನಿರೂಪಿತವಾದದ್ದಾಗಿದೆ." ನಾಲ್ಕು ಅಂಕಗಳಲ್ಲಿ ರಚಿತವಾಗಿರುವ ಇದು ಚಂಪೂ ಶೈಲಿಯಲ್ಲಿ ರಚನೆಯಾಗಿದೆ. ಇಲ್ಲಿ ಬಳಕೆಯಾಗಿರುವ ಶಬ್ದಸಂಪತ್ತು ಮತ್ತು ಭಾಷೆಯಿಂದಾಗಿ ಈ ಕವಿಯ ಪಾಂಡಿತ್ಯ ತಿಳಿದು ಬರುತ್ತದೆ. ಸಿಂಗರಾರ್ಯ ನಾಟಕದ ವಸ್ತು ವಾಸುದೇವ-ಮಿತ್ರವಿಂದೆಯರ ಪರಿಣಯ ಭಾಗಕ್ಕೆ ಸೀಮಿತವಾಗಿದೆ. ಇದು ಭಾವುಕ ನಾಟಕವಾಗಿದ್ದರೂ ಕಲ್ಪನೆ ವಾಸ್ತವಗಳೆರಡೂ ಹಿತಮಿತವಾಗಿ ಬಳಕೆಯಾಗಿವೆ. "ಕರ್ನಾಟಕದಲ್ಲಿ ಪ್ರಥಮ ನಾಟಕವೇ ಮಿತ್ರವಿಂದಾ ಗೋವಿಂದ ಎನ್ನುವವರು ಕ್ರಿ.ಶ. ೧೬೦೦ ಕ್ಕಿಂತ ಮೊದಲೇ ಅಸ್ತಿತ್ವದಲ್ಲಿದ್ದ ಯಕ್ಷಗಾನ ಪ್ರಸಂಗಗಳು ಕನ್ನಡ ನಾಟಕದ ರೂಪವಲ್ಲವೆಂದು ಏತಕ್ಕೆ ತರ್ಕಿಸಬೇಕೋ ನಾನು ತಿಳಿಯೆ" ಎಂದು ಶಿವರಾಮಕಾರಂತರು ಪ್ರಶ್ನಿದ್ದಾರೆ. ಕನ್ನಡದ ಮೊದಲ ರಾಷ್ಟ್ರಕವಿ ಗೋವಿಂದಪೈಯವರು ತಮ್ಮ 'ಕನ್ನಡ ನಾಟಕದ ಹಳಮೆ' ಎಂಬ ಲೇಖನವೊಂದರಲ್ಲಿ "ಕ್ರಿ.ಶ. ೯-೧೦ನೇ ಶತಮಾನದಿಂದ ಕುಮಾರವ್ಯಾಸನ ಕಾಲದವರೆಗೆ ಕೆಲವಾದರೂ ನಾಟಕಗಳು ಕನ್ನಡದಲ್ಲಿ ಇದ್ದಿರಬೇಕು. ಆದರೆ ಕಾಲಕ್ರಮದಲ್ಲಿ ನಷ್ಟವಾಗಿರಬೇಕು ಇಲ್ಲವೆ ಇನ್ನೂ ಗುಪ್ತವಾಗಿರಬೇಕು" ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇದೇನೇಯಿದ್ದರೂ ನಾವು ಮಿತ್ರವಿಂದಾ ಗೋವಿಂದವನ್ನೆ ಕನ್ನಡದ ಮೊದಲ ನಾಟಕವೆಂದು ಸದ್ಯಕ್ಕೆ ಒಪ್ಪಬಹುದಾಗಿದೆ.

**(ಇ) ಅನುವಾದಿತ ಸಂಸ್ಕೃತ ನಾಟಕಗಳು**

೧೬೮೦ ರ ಅನಂತರ ಸುಮಾರು ಎರಡು ಶತಮಾನಗಳ ಕಾಲ ಕನ್ನಡ ಸಾಹಿತ್ಯದಲ್ಲಿ ನಾಟಕಗಳು ರಚನೆಯಾಗಿರುವುದು ಕಂಡುಬಂದಿಲ್ಲ. ೧೯ನೇ ಶತಮಾಣದ ಕೊನೆಯಲ್ಲಿ ಸಂಸ್ಕೃತ ನಾಟಕಗಳ ಭಾಷಾಂತರ ನಾಟಗಳ ಸುಗ್ಗಿಯ ಸಂಭ್ರಮ ಪ್ರಾರಂಭವಾಯಿತು. ಕಾಳಿದಾಸನ ಶಾಕುಂತಲ ನಾಟಕವನ್ನು ಚುರಮುರಿ ಶೇಷಗಿರಿರಾಯರು ೧೭೬೯ರಲ್ಲಿ ಕನ್ನಡಕ್ಕೆ ತಂದರು. ಆಗಿನ ಕಾಲದ ಪ್ರೇಕ್ಷಕರ ಆಸಕ್ತಿಗನುಗುಣವಾಗಿ ಕಾಳಿದಾಸನ ಗದ್ಯ ಸಂಭಾಷಣೆಯಸನ್ನು ಅಲ್ಲಲ್ಲಿ ಉತ್ತರ ಕರ್ನಾಟಕದ ದೇಶೀ ಹಾಡಿನ ಪರಂಪರೆಗೆ ಹಾಡಿನ ಮೆರಗನ್ನು ನೀಡಿದ್ದಾರೆ. ಇದರಿಂದಾಗಿ ಜನರ ಸಂಗೀತದ ಒಲವಿಗೆ ಸ್ಪಂದಿಸುವ ಸಂದರ್ಭ ಸೃಷ್ಟಿಯಾಯಿತು.

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಚುರಮುರಿ ಶೇಷಗಿರಿರಾಯರು ಮತ್ತು ಬಸವಪ್ಪಶಾಸ್ತ್ರಿಗಳಿಂದ ಆರಂಭವಾಗಿ ಆಧುನಿಕ ನಾಟಕ ಪರಂಪರೆಯು

ನವೋದಯದವರೆಗೂ ಭಾಷಾಂತರ ನಾಟಕಗಳೇ ಕನ್ನಡ ರಂಗಭೂಮಿಯಲ್ಲಿ ವಿಜೃಂಭಿಸಿದವು. ಮೈಸೂರಿನಲ್ಲಿ ಅಸ್ತಿತ್ವಕ್ಕೆ ಬಂದ "ಶ್ರೀ ಚಾಮರಾಜೇಂದ್ರ ಕರ್ನಾಟಕದ ನಾಟಕ ಸಭೆಯ ಕೋರಿಕೆಯನ್ನು ಪೂರೈಸಲು ಅರಮನೆಯ ವಿದ್ವಾಂಸರು ನಾಟಕಗಳನ್ನು ರಚಿಸಲು ಮುಂದಾದರು." ಅವರಲ್ಲಿ ಪ್ರಮುಖರಾದವರು ಬಸವಪ್ಪಶಾಸ್ತ್ರಿಗಳು. ಇವರು 'ಶಾಕುಂತಲ', 'ವಿಕ್ರಮೋರ್ವಶೀಯ', ರತ್ನಾವಳಿ', 'ಉತ್ತರರಾಮಚರಿತ್ರೆ', 'ಮಾಲತೀಮಾಧವ, 'ಚಂಡಕೌಶಿಕ' ಮುಂತಾದ ಸಂಸ್ಕೃತದ ನಾಟಕಗಳನ್ನು ಭಾಷಾಂತರಿಸಿದರು. ಈಪೈಕಿ ಶಾಸ್ತ್ರಿಗಳೂ ಅನುವಾದಿಸಿದ ಶಾಕುಂತಲ (೧೮೮೩)ಕನ್ನಡ ಇತಿಹಾಸದಲ್ಲಿ ವಿಶಿಷ್ಟ ಸ್ಥಾನಗಳಿಸಿತು.

ಸಂಸ್ಕೃತ ನಾಟಕಗಳನ್ನು ಕನ್ನಡಿಸಿದವರಲ್ಲಿ ಉತ್ತರ ಕರ್ನಾಟಕದ ಧೋಂಡೋನರಸಿಂಹ ಮುಳಬಾಗಿಲರು ಪ್ರಮುಖರು. ಇವರು 'ಉತ್ತರರಾಮಚರಿತ್ರೆ' 'ಮೃಚ್ಛಕಟಿಕ' 'ವೇಣೀಸಂಹಾರ' 'ಮಾಳವಿಕಾಗ್ನಿಮಿತ್ರ'ಗಳನ್ನು ಅನುವಾದಿಸಿದ್ದಾರೆ. ಜಯರಾಮಾಚಾರ್ಯರು 'ಚಂಡಕೌಶಿಕ', ವೇಣೀಸಂಹಾರ'ವನ್ನು ಕನ್ನಡಿಸಿದ್ದಾರೆ. 'ಮೃಚ್ಛಕಟಿವನ್ನು ಹಾಗೂ ಹರ್ಷವರ್ಧನನ 'ನಾಗಾನಂದ'ವನ್ನು ಗರಣಿ ವೈ. ಕೃಷ್ಣಾಚಾರ್ಯರು ಅನುವಾದಿಸಿದ್ದಾರೆ. 'ನಾಗಾನಂದ' ನಾಟಕವನ್ನು 'ಕರ್ನಾಟಕ ನಾಗಾನಂದ' ವೆಂದು ಮೈಸೂರಿನ ಅನಂತನಾರಾಯಣಶಾಸ್ತ್ರಿಗಳು ಅನುವಾದಿಸಿದ್ದಾರೆ. ನಂಜನಗೂಡು ಶ್ರೀಕಂಠಶಾಸ್ತ್ರಿಗಳು 'ಪ್ರಿಯದರ್ಶಿಕಾ' ನಾಟಕವನ್ನು ಕನ್ನಡಿಸಿದ್ದಾರೆ. ಭಾಸನ 'ಸ್ವಪ್ನವಾಸವದತ್ತ'ವನ್ನು ದೇವಶಿಖಾಮಣಿ ಅಳಸಿಂಗರಾಚಾರ್ಯರು, 'ಪ್ರತಿಮಾನಾಟಕ'ವನ್ನು ಮೈಸೂರಿನ ಸೀತಾರಾಮಶಾಸ್ತ್ರಿಗಳು ಅನುವಾದಿಸಿದರು. 'ದೂತವಾಕ್ಯ'ವನ್ನು ಕಡಬದ ನಂಜುಂಡಶಾಸ್ತ್ರಿ ಮತ್ತು ಕೆ.ಆರ್. ರಾಮಸ್ವಾಮಿಗಳು ಅನುವಾದಿಸಿದರು. ಎಂ.ಎಲ್. ಶ್ರೀಕಂಠೇಶಗೌಡರು ಸಂಸ್ಕೃತ ಜಾನಕಿ ಪರಿಣಯವನ್ನು ಆಧರಿಸಿ 'ಸೀತಾಸ್ವಯಂವರ' (೧೯೦೧) ಎಂಬ ಸಂಸ್ಕೃತನಾಟಕ ರಚಿಸಿದರು.

**(ಈ) ರೂಪಾಂತರಿತ ಇಂಗ್ಲಿಷ್ ನಾಟಕಗಳು**

ಸಂಸ್ಕೃತದ ಜೊತೆಗೆ ತಮಿಳು, ಮರಾಠಿ, ಹಿಂದುಸ್ತಾನಿ, ತೆಲುಗುನಾಟಕಗಳು ಅನುವಾದವಾಗಿವೆಯಾದರೂ ಇಂಗ್ಲಿಷ್ ರೂಪಾಂತರಗಳು ಪ್ರಮುಖವಾಗುತ್ತವೆ. "ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಸಾಹಿತ್ಯ ಕೃತಿಯೊಂದನ್ನು ಅನುವಾದಿಸುವಾಗ ಎದುರಾಗುವ ತೊಡಕುಗಳು ತೀರಾ ಭಿನ್ನವಾಗಿರುತ್ತದೆ. ನಮ್ಮ ಜಾಯಮಾನಕ್ಕೆ ಒಗ್ಗದ ಅನೇಕ ನುಡಿಗಟ್ಟುಗಳು ಅಲ್ಲಿವೆ. ಶಬ್ದಸಂಪತ್ತಿನ ದೃಷ್ಟಿಯಿಂದಲೂ ಇಂಗ್ಲಿಷ್ ಕನ್ನಡವನ್ನು ಹೋಲಿಸುವಂತಿಲ್ಲ. ಸಾಂಸ್ಕೃತಿಕವಾಗಿ ಇವೆರಡೂ ಭಾಷೆಗಳು ತೀರ ಭಿನ್ನವಾದ ಮೂಲಕ್ಕೆ ಸೇರುತ್ತವೆ." ಇಂಗ್ಲಿಷ್ ನಾಟಕವನ್ನು ಅನುವಾದ ಮಾಡಿದ ಕೆಲವರು ಇಂಗ್ಲಿಷ್ ಸಹಾಯವನ್ನು ಪಡೆದುಕೊಂಡು ತಮ್ಮ ಕೆಲಸ ಸಾಧಿಸಿದರು. ಬಹುತೇಕ ಹಲವರು ಅನುವಾದಕ್ಕೆ ಬದಲಾಗಿ ರೂಪಾಂತಕ್ಕೆ ಮೊರೆಹೋದರು.

"ಬಸವಪ್ಪಶಾಸ್ತ್ರಿಗಳು ಇಂಗ್ಲಿಷ್ ಬಲ್ಲವರ ಸಹಾಯದಿಂದ 'ಒಥೆಲೊ' ನಾಟಕವನ್ನು 'ಶೂರಸೇನಚರಿತ್ರೆ' ಎಂದು ರೂಪಾಂತರಿಸಿದರು. 'ಕಿಂಗ್‌ಲಿಯರ್' ನಾಟಕವನ್ನು 'ಹೇಮಚಂದ್ರವಿಲಾಸ' ಎಂಬ ಹೆಸರಿನಿಂದ ಎಂ.ಎಸ್. ಪುಟ್ಟಣನವರು ರೂಪಾಂತರಿಸಿದರು. ಸಿ.ಆನಂದರಾಯರು 'ರೋಮಿಯೋ ಜ್ಯೂಲಿಯಟ್'ಅನ್ನು 'ರಾಮವರ್ಮಲೀಲಾವತಿ' ಎಂದು ರೂಪಾಂತರಿಸಿದ್ದಾರೆ. ಕೆರೂರು ವಾಸುದೇವಾಚಾರ್ಯರು ಇದೇ ನಾಟಕವನ್ನು 'ರಮೇಶ್-ಲಲಿತ' ಎಂದು ಕನ್ನಡೀಕರಿಸಿದರು. 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್'ಅನ್ನು 'ವಸಂತಯಾಮಿನೀ ಸ್ವಪ್ನ ಚಮತ್ಕಾರ'ವೆಂದು ತಂದರು. ಡೆಪ್ಯುಟಿ ಚನ್ನಬಸಪ್ಪನವರು 'ನಗಿಸುವ ಕಥೆ' ಎಂಬುದಾಗಿ ರೂಪಾಂತರಿಸಿದರು. ಎಂ.ಎಲ್. ಶ್ರೀಕಂಠೇಗೌಡರು ಷೇಕ್ಸ್‌ಪಿಯರ್‌ನ ರುದ್ರನಾಟಕವಾದ 'ಮ್ಯಾಕಬೆತ್'ಅನ್ನು 'ಪ್ರತಾಪರುದ್ರದೇವ' (೧೮೯೫) ಎಂದು, ಪ್ರಹಸನವಾದ 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್'ಅನ್ನು (೧೮೯೬) 'ಪ್ರಮೀಳಾರ್ಜುನೀಯ' ಎಂದು ರೂಪಾಂತರಿಸಿದ್ದಾರೆ."

**ನಾಟಕದ ಕಂಪನಿ ಪ್ರಾರಂಭ**

ಕನ್ನಡದ ಕರಾವಳಿ ಭಾಗವತರಾಟಗಳು ಕ್ರಿ.ಶ. ೧೮೪೦ರ ಕಾಲಘಟ್ಟದಲ್ಲಿಯೂ ಹೆಚ್ಚೆಚ್ಚು ನಡೆಯುತ್ತಿದ್ದವು. ಇದರಿಂದ ಪ್ರಭಾವಿತನಾದ ಸಾಂಗ್ಲಿ ಸಂಸ್ಥಾನದ ಆಶ್ರಯದಲ್ಲಿದ್ದ ಚತುರ ಕರಣಿಕನಾದ ವಿಷ್ಣುಪಂತ ಭಾವೆ ಎಂಬುವನು ಮರಾಠಿ ನಾಟಕಗಳನ್ನು ರಚಿಸಿ ಆಡಲು ಪ್ರಾರಂಭಿಸಿದ. ಪ್ರೇಕ್ಷಕರ ಪ್ರೋತ್ಸಾಹ ಗಮನಿಸಿ "ಸಾಂಗ್ಲೀಕರ್ ಸಂಗೀತ ನಾಟಕ ಮಂಡಳಿ" ಎಂಬ ಹೆಸರಿನಿಂದ ಮಹಾರಾಷ್ಟ್ರದ ಜೊತೆಗೆ ಉತ್ತರಕರ್ನಾಟಕದ ಪ್ರಮುಖ ಪಟ್ಟಣಗಳಲ್ಲೂ ನಾಟಕಗಳನ್ನಾಡತೊಡಗಿದನು. ೧೮೫೦ರ ಸಂದರ್ಭದಲ್ಲಿ ಮರಾಠೀ ನಾಟಕಗಳ ಅಲೆ ಆರಂಭವಾಯಿತು. ಪ್ರೇಕ್ಷಕರು ಹೊಸ ಬಗೆಯ ಕಥೆಗಳ ಕಡೆಗೆ ತಮ್ಮ ಆಸಕ್ತಿ ಬೆಳೆಸಿಕೊಂಡು. ರಂಗಮಂದಿರದ ಕಡೆಗೆ ಬರತೊಡಗಿದರು. ಕನ್ನಡ ರಂಗಭೂಮಿಯು ತನ್ನತನವನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಈ ಬೆಳವಣಿಗೆಯಿಂದಾಗಿ ಕನ್ನಡದ ರಂಗಭೂಮಿಯ ಮೇಲೆ ಆಸಕ್ತಿ ಹೊಂದಿದ್ದವರೆಲ್ಲರು ನಿರಾಶರಾದರು. ಈ ಹಿನ್ನೆಲೆಯಲ್ಲಿ ಕನ್ನಡ ರಂಗಚಟುವಟಿಕೆಗಳು ಅನಿವಾರ್ಯವಾದವು.

'ಶಾಂತಕವಿ'ಗಳೆಂದೇ ಪ್ರಸಿದ್ಧರಾದ ಸಕ್ಕರಿಬಾಳಾಚಾರ್ಯರು ಮರಾಠಿರಂಗದಿಂದ ಪಾಠಕಲಿತರು. ಕರಾವಳಿಯ ಯಕ್ಷಗಾನಗಳಲ್ಲಿ ಆಸಕ್ತಿಹೊಂದಿ ಅವುಗಳಿಂದ ಸ್ಫೂರ್ತಿಗೊಂಡಿದ್ದ ಇವರು ಅದೇ ರೀತಿಯಲ್ಲಿ ಹೊಸನಾಟಕಗಳನ್ನು ರಚಿಸಿ ಕಲಾವಿದರಿಗೆ ತರಬೇತಿ ನೀಡಿ ಕನ್ನಡದಲ್ಲಿಯೇ ಹೊಸ ಪ್ರಯೋಗಗಳನ್ನು ನಡೆಸಿ ಮರಾಠಿ ನಾಟಕಗಳ ಕಡೆಗೆ ಮಾರುಹೋಗಿದ್ದವರನ್ನು ರಂಗಭೂಮಿಯ ಕಡೆಗೆ ಆಕರ್ಷಿಸಿದರು." ಹೀಗೆ "ಕರ್ನಾಟಕದಲ್ಲಿ ರಂಗಭೂಮಿ ವೃತ್ತಿನಿರತವಾಗಿ ೧೮೭೭ರಲ್ಲಿ ಸ್ಥಾಪನೆಯಾಯಿತು."

### (ಅ) ಗದುಗಿನ ಶ್ರೀ ವೀರನಾರಾಯಣ ಪ್ರಾಸಾದಿತ ಕೃತಪುರ ನಾಟಕ ಮಂಡಳಿ

ಗದುಗಿನ ಉತ್ಸಾಹಿಗಳು, ಶ್ರೀಮಂತರು ಆದ ಉಮಚಗಿ ಲಚ್ಚಪ್ಪನಾಯಕರು ಶಾಂತಕವಿಗಳ ಮನವಿಯ ಮೇರೆಗೆ ಈ ನಾಟಕಮಂಡಳಿಯನ್ನು ಪ್ರಾರಂಭಿಸಿದರು. ಸ್ವತಃ ಶಾಂತಕವಿಗಳೇ ಈ ಸಂಸ್ಥೆಗಾಗಿ ನಾಟಕಗಳನ್ನು ಬರೆಯತೊಡಗಿದರು. ಮೊಲಿಗೆ 'ಉಷಾಹರಣ' ನಾಟಕವನ್ನು ಬರೆದು ಅಭಿನಯಿಸಿದರು. "ಗುಡಿ ರಾಘವೇಂದ್ರಚಾರ್ಯ, ಹಂಪಿ ಹೊಳಿಶಂಕರಭಟ್ಟ, ಅಸುಂಡಿವೆಂಕಟಪ್ಪ, ದೋಣಿ ರಂಗಪ್ಪ, ಕಳಕಲ್ಲ ಗುರುಲಿಂಗಪ್ಪ, ಯಜ್ಞೇಶ್ವರ ಪಂತ, ಕೊಣ್ಣೂರು ಜೀವುಬಾಳಪ್ಪ, ಕನ್ನಿ ಇಮ್ಮಣ್ಣ" ಮುಂತಾದವರು ಕಲಾವಿದರಾಗಿ ಅಭಿನಯಿಸಿದರು. 'ಸುಧನ್ವವಧ' 'ಸೀತಾರಣ್ಯಪ್ರವೇಶ' 'ವತ್ಸಲಾಹರಣ' 'ಕೀಚಕವಧ' 'ಸಿರಿಯಾಳ ಸತ್ವಪರೀಕ್ಷೆ' ಮುಂತಾ ನಾಟಕಗಳನ್ನು ಒಳಗೊಂಡತೆ ಮೂವತ್ತೈದು ನಾಟಕಗಳನ್ನು ರಚಿಸಿದ್ದಾರೆ. ನಾಟಕ ಕಂಪನಿಯಲ್ಲಿ ಶಾಂತಕವಿಗಳೇ ನಾಟಕ ಮಾಸ್ತರರೂ ಕೂಡ ಆಗಿದ್ದರು. ಈ ಕಾರಣಕ್ಕಾಗಿಯೇ ಅವರನ್ನು 'ಕನ್ನಡದ ನಾಟಕದ ಪ್ರಥಮ ಗುರು' ಎಂದು ಜನ ಕರೆದರು. ಈ ಪ್ರಭಾವದಿಂದಾಗಿ ಅನೇಕ ವೃತ್ತಿ ನಾಟಕಗಳನ್ನು ರಚಿಸತೊಡಗಿದರು. ಈ ಮಂಡಳಿಯು ಪ್ರಾರಂಭದಲ್ಲಿ ಧಾರವಾಡ, ಬೆಳಗಾಂ ನವಲಗುಂದ, ಹುಬ್ಬಳ್ಳಿ, ಸವದತ್ತಿ ಮೊದಲಾದ ಕಡೆ ನಾಟಕವನ್ನು ಅಭಿನಯಿಸಿತು. ಈ ಸಂಸ್ಥೆಯು ಆಧುನಿಕತೆಗೆ ಒಪ್ಪುವಂತೆ ವ್ಯವಸ್ಥಿತ ರಂಗಮಂದಿರ, ವೇಷ-ಭೂಷಣಗಳನ್ನು ಅಳವಡಿಸಿಕೊಂಡರು. ಈ ಹಿನ್ನೆಲೆಯಲ್ಲಿ ಮರಾಠಿ ಮತ್ತು ಪಾರ್ಸಿ ಕಂಪನಿಗಳ ಪ್ರಭಾವವಿದ್ದರೂ, ಕನ್ನಡ ಜಾನಪದ ಸಂಪ್ರದಾಯವನ್ನು ಕೈ ಬಿಡಲಿಲ್ಲ.

ಗುಡಿ ರಾಘವೇಂದ್ರಾಚಾರ್ಯರು ಭೀಮ, ಘಟೋದ್ಗಜ ಮೊದಲಾದ ಪ್ರಮುಖ ಪಾತ್ರಗಳನ್ನು ಅಭಿನಯಿಸುತ್ತಿದ್ದರು. ಇವರ ಅಭಿನಯದ ಪ್ರಭಾವದಿಂದಾಗಿ ರಂಗಮಂದಿರದ ತುಂಬ ಜನ ಕಿಕ್ಕಿರಿದು ಸೇರುತ್ತಿದ್ದರು. ಡಂಬಳ ಹುಚ್ಚಾಚಾರ್ಯರಿಗೆ ನಾಯಕಿಯ ಪಾತ್ರ ಮೀಸಲಾಗಿರುತ್ತಿತ್ತು. ಕೊಣ್ಣೂರು ಜೀವೂಬಾಳಪ್ಪನವರು ಸೂತ್ರಧಾರನ ಪಾತ್ರ ನಿರ್ವಹಿಸುತ್ತಿದ್ದರು. ಸೂತ್ರಧಾರನ ಪ್ರವೇಶದ ನಂತರ "ಬೇವಿನ ಸೊಪ್ಪಿನಿಂದಲಂಕೃತವಾದ ವಿದೂಷಕ ಕೋಡಂಗಿಗಳ ಕುಣಿತ, ಮುಂದೆ ಗಣೇಶ, ಶಾರದೆಯಂತಹ ದೇವತೆಗಳು ಪ್ರವೇಶಿಸಿ ನಾಟಕವು ನಿರ್ವಿಘ್ನವಾಗಿ ನಡೆಯಲೆಂದು ಹರಸುತ್ತಿದ್ದರು." ಶಾಂತಕವಿಗಳು ಕಲಾವಿದರಲ್ಲಿ ಶಿಸ್ತನ್ನು ಬೆಳಸಿದ್ದರು. ಕೆಲವೇ ವರ್ಷಗಳಲ್ಲಿ ಈ ಕಂಪನಿ ಹೆಚ್ಚು ಹೆಸರುಗಳಿಸಿಕೊಳ್ಳುವುದರ ಜೊತೆಗೆ ಹಣವನ್ನೂಗಳಿಸಿಕೊಂಡಿತು. ಸಾಹಿತ್ಯ ಅಭಿನಯ ಇವೆರಡರ ದೃಷ್ಟಿಯಿಂದಲೂ ಶಾಂತಕವಿಗಳ ನಾಟಕ ಮಂಡಳಿ ಹೆಸರುಗಳಿಸಿತು. ಸುಮಾರು ಹದಿನಾರು ವರ್ಷಗಳ ಕಾಲ ಸತತವಾಗಿ ನಾಟಕಗಳನ್ನಾಡಿದ ಮೇಲೆ ೧೮೯೪-೯೫ರಲ್ಲಿ ಅದರ ಪ್ರಮುಖ ನಟರು ತೀರಿಕೊಂಡಾಗ ನಾಟಕ ಮಂಡಳಿ ಅವಸಾನ ಕಂಡಿತು. ಶಾಂತಕವಿಗಳಿಂದ ಪ್ರಭಾವಿತರಾಗಿ ಉತ್ತರಕರ್ನಾಟದಲ್ಲಿ "ಧಾರವಾಡ, ರಾಣಿಬೆನ್ನೂರು, ಹೀರೇಕೆರೂರು, ಲಕ್ಷ್ಮೇಶ್ವರ, ಹುಬ್ಬಳ್ಳಿ, ಕೌಜಲಗಿ, ನವಲಗುಂದ,

ನರಗುಂದ, ಹಲಸಿಗಿ, ಬಾದಾಮಿ, ಹಾಗೂ ರಬಕವಿಗಳಲ್ಲಿ ನಾಟಕಮಂಡಳಿಗಳು ಸ್ಥಾಪನೆಯಾದವು." ಹಾಗೆಯೇ ಮೈಸೂರು ಪ್ರಾಂತ್ಯದಲ್ಲಿಯೂ ಮರಾಠಿ ನಾಟಕಗಳ ಪ್ರಭಾವವನ್ನು ತಡಗಟ್ಟಲು ೧೮೭೯-೮೦ರಲ್ಲಿ ಸಿ.ಆರ್. ರಘುನಾಥರಾಯರು 'ಶಾಕುಂತಲ ಕರ್ನಾಟಕ ಸಭಾ' ಎಂದು ಹೆಸರಿಟ್ಟು ಕಾರ್ಯಪ್ರವೃತ್ತರಾದರು. ನಂತರ ಮೈಸೂರಿನ ಅರಸರಾದ ಚಾಮರಾಜೇಂದ್ರ ಒಡೆಯರ್ ಕಂಪನಿಯೊಂದನ್ನು ಹುಟ್ಟುಹಾಕುವ ಮೂಲಕ ಮೈಸೂರಿನಲ್ಲಿ ರಂಗಭೂಮಿಯ ಉದಯವಾಯಿತು.

### (ಆ) ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ -ಮೈಸೂರು

೧೮೮೦ ಚಾಮರಾಜೇಂದ್ರ ತಮ್ಮ ಆಶ್ರಯದಲ್ಲಿದ್ದ ನಾಟಕ ಮಂಡಳಿಯನ್ನು ಸ್ಥಾಪಿಸಿ ಕನ್ನಡ ರಂಗಭೂಮಿಗೆ ಭದ್ರವಾದ ಬುನಾದಿಯನ್ನು ಹಾಕಿದರು. "ಅರಮನೆಗೆ ಸೇರಿದ ರಾಯಲ್ ಪಾಠಶಾಲೆ ವಿದ್ಯಾರ್ಥಿಗಳಿಂದ ಶಾಲೆಯ ಮುಖ್ಯೋಪಾಧ್ಯಾಯರ ಮುಂದಾಳತ್ವದಲ್ಲಿ 'ಪ್ರಹ್ಲಾದ' ಎಂಬ ಮೊದಲ ನಾಟಕವನ್ನು ಅಭಿನಯಿಸಿದರು. ಶಾಲೆಯ ಉಪಾಧ್ಯಾಯ ವರ್ಗದವರು 'ಫಿನಿಷ್ಡ್ ಅಪಾರ್ಟ್‌ಮೆಂಟ್ಸ್' ಎಂಬ ಇಂಗ್ಲಿಷ್ ನಾಟಕವನ್ನು ವಿದ್ಯಾರ್ಥಿ ನಟರಿಂದ ಸಿದ್ಧಗೊಳಿಸಿದರು." ಇವೆರಡು ನಾಟಕಗಳಿಂದಾಗಿ ಪ್ರಭಾವಿತರಾದ ಚಾಮರಾಜೇಂದ್ರ ತಮ್ಮ ಆಸ್ಥಾನದಲ್ಲಿದ್ದ ಉತ್ತಮ ಕಲಾವಿದರನ್ನೆಲ್ಲಾ ಬಳಸಿಕೊಂಡು, ಕೆಲವರನ್ನು ಮುಂಬೈಗೆ ಕಳುಹಿಸಿ ಅಲ್ಲಿನ ರಂಗ, ವಾಸ್ತುಶಿಲ್ಪ, ಪರದೆಗಳು, ವೇಷಭೂಷಣಗಳ ಕ್ಷೇತ್ರದಲ್ಲಿ ತರಬೇತಿ ಕೊಡಿಸಿದರು. ಆಸ್ಥಾನ ವಿದ್ವಾಂಸರೂ ಕವಿಗಳು ಆಗಿದ್ದ ಬಸವಪ್ಪಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ನಂಜನಗೂಡು ಸುಬ್ಬಾಶಾಸ್ತ್ರಿ, ಜಯರಾಯಾಚಾರ್ಯ, ಮೊದಲಾದವರಿಗೆ ನಾಟಕಗಳನ್ನು ರಚಿಸುವ ಜವಾಬ್ದಾರಿಯನ್ನು ಹೊರಿಸಲಾಯಿತು. ದಿವಾನ್ ಸಿ.ರಂಗಚಾರ್ಲು ಅವರು ಈ ಎಲ್ಲ ಬೆಳವಣಿಗೆಗ ಶ್ರಮವಹಿಸಿದರು.

ಬಸವಪ್ಪಶಾಸ್ತ್ರಿಗಳು ಕಾಳಿದಾಸನ ಶಾಕುಂತಲ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು. ೧೮೮೧ರಲ್ಲಿ ನಾಟಕವನ್ನು ಪ್ರದರ್ಶಿಸಲಾಯಿತು. ಜನರಿಂದ ಉತ್ತಮ ಪ್ರತಿಕ್ರಿಯೆ ಸಿಕ್ಕಿತು. ನಾಟಕ ಪ್ರದರ್ಶನ ಮೈಸೂರಿಗಷ್ಟೆ ಸೀಮಿತವಾಗದೆ ಬೆಂಗಳೂರು, ಧಾರವಾಡ, ಬೆಳಗಾವಿ, ಬಳ್ಳಾರಿಗಳಲ್ಲಿಯೂ ನಡೆಯಿತು. ಅನಂತರ ಎ. ಆನಂದರಾಯರು ಷೇಕ್ಸ್‌ಪಿಯರ್‌ನ 'ರೋಮಿಯೊ ಅಂಡ್ ಜೂಲಿಯೆಟ್ ಮತ್ತು 'ಮರ್ಚೆಂಟ್ ಆಫ್ ವೆನಿಸ್' ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಸೋಸಲೆ ಅಯ್ಯಾಶಾಸ್ತ್ರಿಗಳು 'ಚಂಡಕೌಶಿಕ' ಸುಬ್ಬಾಶಾಸ್ತ್ರಿಗಳು 'ಮೃಚ್ಛಕಟಿಕ' ಬಸವಪ್ಪಶಾಸ್ತ್ರಿಗಳು 'ಉತ್ತರರಾಮಚರಿತೆ' 'ಮಾಲತೀಮಾಧವ' ನಾಟಕಗಳನ್ನು ಅನುವಾದಿಸಿಕೊಟ್ಟರು. ಅನಂತರದಲ್ಲಿ ಕನ್ನಡ ನಾಡಿನ ಜನತೆ ಮರಾಠಿ ಹಾಗೂ ಪಾರ್ಸಿ ಕಂಪನಿಗಳ ಆಕರ್ಷಣೆಯಿಂದ ಮುಕ್ತರಾದರು. ನಾಡಿನಾದ್ಯಾಂತ ಹೊಸ ಹೊಸ ಸಂಸ್ಥೆಗಳು ಹುಟ್ಟಿಕೊಂಡವು.

**(ಇ) ರಾಜಧಾನಿ ನಾಟಕ ಮಂಡಳಿ, ಮೈಸೂರು**

೧೮೮೧ ರಲ್ಲಿ ಮಂಡ್ಯರಂಗಾಚಾರ್ಯರು ಹಾಗೂ ಅವರ ಗೆಳೆಯರೂ ಸೇರಿ ಸ್ಥಾಪಿಸಿದ ನಾಟಕ ಮಂಡಳಿ ಇದು. ಚಾಮರಾಜೇಂದ್ರ ನಾಟಕಸಭೆಗೂ ಇದಕ್ಕೂ ಒಳ್ಳೆಯ ಪೈಪೋಟಿಯಿತ್ತು. 'ಬಾಣಾಸುರೋಪಾಖ್ಯಾನ' ಎಂಬ ನಾಟಕವನ್ನು ಪ್ರಾರಂಭದಲ್ಲಿ ಅಭಿನಯಿಸಿದರು. ನಂತರ 'ಇಂದ್ರಸಭಾ' 'ಲೈಲಾಮಜನೂ' ಗಳೆಂಬ ನಾಟಕಗಳು ಹೆಚ್ಚು ಮೆಚ್ಚುಗೆ ಪಡೆದವು. ರಂಗಾಚಾರ್ಯರು ಶೂರಸೇನ ಚರಿತೆಯ 'ಶೂರಸೇನ' ರಾಮವರ್ಮ, ಲೀಲಾವತಿಯ 'ರಾಮವರ್ಮ' ವೇಣೀ ಸಂಹಾರದ 'ಅಶ್ವತ್ಥಾಮ' ನಾಗಿ ಕಾಣಿಸಿಕೊಂಡರು. ಸ್ತ್ರೀ ಪಾತ್ರಗಳಲ್ಲಿ ವರನಟ ಲಕ್ಷ್ಮೀಪತಿ ಶಾಸ್ತ್ರಿಯವರೂ ಮಿಂಚಿದರು. "ಶ್ರೀನಿವಾಸಯ್ಯಂಗಾರರ 'ರತ್ನಾವಳಿ' 'ಸತ್ಯವರ್ಮ' 'ಹರಿಶ್ಚಂದ್ರ' ಎಸ್. ಜಿ. ನರಸಿಂಹಾಚಾರ್ಯರ 'ಶಾಕುಂತ' 'ಚಂದ್ರಹಾಸ' ಎ. ಆನಂದರಾಯರ 'ರಾಮವರ್ಮ ಲೀಲಾವತಿ' ಮಾದಪ್ಪಶಾಸ್ತ್ರಿಗಳ 'ಮಕರಂದಿಕಾ ಪರಿಣಯ' ಅವರು ಅಭಿನಯಿಸುತ್ತಿದ್ದ ಕೆಲವು ನಾಟಕಗಳು. ಮೈಸೂರಿನ ವಕೀಲರೂ, ಉದ್ಯೋಗಸ್ಥರೂ, ವ್ಯಾಪಾರಿಗಳೂ ರಂಗಾಚಾರ್ಯರ ನಾಟಕಮಂಡಳಿಗೆ ಸಹಕಾರ ಕೊಟ್ಟರು. ಧಾರವಾಡ, ಹುಬ್ಬಳ್ಳಿ ಹಾಗೂ ಬಳ್ಳಾರಿ ಸೀಮೆಗಳಲ್ಲಿ ನಾಟಕ ಪ್ರದರ್ಶಿಸಿದರು. ನಂತರ ಮಂಡಳಿಯ ಕಲಾವಿದರಲ್ಲಿ ಅಸೂಯೆಗಳು ಹುಟ್ಟಿಕೊಂಡವು. ಒಗ್ಗಟಿನಿಂದ ಕಲೆತು ದುಡಿಯುವ ಭಾವನೆ ನಾಶವಾಯಿತು. ಇದರಿಂದ ಬೇಸತ್ತ ರಂಗಾಚಾರ್ಯರು ಮಂಡಳಿಯನ್ನು ವಿಸರ್ಜಿಸಿದರು."

**(ಈ) ಗುಬ್ಬಿ ಶ್ರೀ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಮಂಡಳಿ**

ಗುಬ್ಬಿ ಚಂದಣ್ಣ, ಅಬ್ದುಲ್ ಅಜೀಜ್ ಹಾಗೂ ಸಾಹುಕಾರ ನೀಲಕಂಠಪ್ಪನವರು ತುಮಕೂರು ಜಿಲ್ಲೆಯ ಗುಬ್ಬಿ ಕಲಾಭಿಮಾನಿಗಳು. ಇವರೆಲ್ಲಾ ಸೇರಿ ೧೮೮೪ರಲ್ಲಿ ಈ ಮಂಡಳಿಯನ್ನು ಆರಂಭಿಸಿದರು. ಮೊದಲ ನಾಟಕವಾಗಿ ಅಂದಿನ ಪ್ರಸಿದ್ಧ ದೊಡ್ಡಾಟದ ಪ್ರಸಂಗವಾಗಿದ್ದ 'ಕುಮಾರರಾಮನಕಥೆ'ಯನ್ನು ನಾಟಕವಾಗಿ ಪರಿವರ್ತಿಸಿ, ಪ್ರದರ್ಶಿಸಿದರು. ಚಾಮರಾಜೇಂದ್ರ ಒಡೆಯರು ನಾಟಕ ನೋಡಿ ಮೆಚ್ಚಿಕೊಂಡು ಸಂಭಾವನೆಯನ್ನು ನೀಡಿದರು. ೧೮೮೬ರಲ್ಲಿ ಬೆಂಗಳೂರಿನಲ್ಲೂ ನಾಟಕ ಪ್ರದರ್ಶನವಾಯಿತು. ನಂತರ ವೀರಪ್ಪಶಾಸ್ತ್ರಿಗಳಿಂದ 'ಚೋರಕಥೆ' ಎಂಬ ಹೊಸ ನಾಟಕವನ್ನು ಬರೆಸಿದರು. ಇದರ ಪ್ರದರ್ಶನದಿಂದಾಗಿ ಸಂಘಕ್ಕೆ ಯಶಸ್ಸು ಸಿಕ್ಕಿತು. ಚಂದ್ರಣ್ಣನವರು ಮಾಲೀಕರಾದ ಮೇಲೆ 'ಸತ್ಯಹರಿಶ್ಚಂದ್ರ', 'ಪಾಂಡವವಿಜಯ', 'ಇಂದ್ರಸಭಾ' ನಾಟಕಗಳು ಪ್ರದರ್ಶಿತವಾದವು.

ಕರ್ನಾಟಕದ ಹಾಸ್ಯನಟರೆಂದು ಹೆಸರಾದ ಗುಬ್ಬಿ ವೀರಣ್ಣನವರು ತಮ್ಮ ಆರನೆಯ ವಯಸ್ಸಿನಲ್ಲೇ ೧೮೯೬ರಲ್ಲಿ ಕಂಪನಿ ಸೇರಿದರು. ಆಸಕ್ತಿಯಿಂದ ಕಂಪನಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಎಲ್ಲಾ ಪಾತ್ರಗಳನ್ನೂ ನಿರ್ವಹಿಸಿದರು. ಚಂದ್ರಣ್ಣನವರ ನಿಧನದ

ನಂತರ ೧೯೨೦ರ ಹೊತ್ತಿಗೆ ಕಂಪನಿಯ ಪೂರ್ಣ ಮಾಲೀಕತ್ವವನ್ನು ವೀರಣ್ಣನವರು ಪಡೆದರು. ೧೯೩೦ರ ಹೊತ್ತಿಗೆ ದಕ್ಷಿಣ ಭಾರತದ ಪ್ರವಾಸವನ್ನು ಮುಗಿಸಿ ವೀರಣ್ಣನವರು ಬೆಂಗಳೂರಿನಲ್ಲಿ ಮತ್ತೊಂದು ನಾಟಕ ಶಾಲೆಯನ್ನು ನಿರ್ಮಿಸಿದರು. ದಕ್ಷಿಣ ಭಾರತದ ಪ್ರಮುಖ ಪಟ್ಟಣಗಳಲ್ಲಿ ನಾಟಕವನ್ನು ಪ್ರದರ್ಶಿಸಿದರು. "೧೯೩೪ರಲ್ಲಿ ಸಂಸ್ಥೆಯ ಸುವರ್ಣ ಮಹೋತ್ಸವವು ಅಂದಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರ ನೇತೃತ್ವದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ಸಮಾರಂಭಕ್ಕಾಗಿ ಬಿ. ಪುಟ್ಟಸ್ವಾಮಯ್ಯನವರಿಂದ 'ಕುರುಕ್ಷೇತ್ರ' ಎಂಬ ಪೌರಾಣಿಕ ನಾಟಕವನ್ನು ಬರೆಯಿಸಿ ಸುಮಾರು ಮೂವತ್ತು ಸಾವಿರ ರೂಪಾಯಿಗಳ ವೆಚ್ಚದಲ್ಲಿ ರಂಗಸಜ್ಜಿಕೆ, ವೇಷಭೂಷಣಗಳನ್ನು ಬಳಸಿಕೊಂಡು ಪ್ರದರ್ಶಿಸಲಾಯಿತು."

ಈ ಮಂಡಳಿಯು 'ಸದಾರಮೆ', 'ಶ್ರೀಕೃಷ್ಣಲೀಲಾ', 'ಮಾರ್ಕಂಡೇಯ', 'ಉಷಾ ಸ್ವಯಂವರ' 'ದಶಾವತಾರ' ಮೊದಲಾದ ಪೌರಾಣಿಕ ನಾಟಕಗಳು, ಕರ್ನಾಟಕ ಸಾಮ್ರಾಜ್ಯ'. 'ಸ್ವಾಮಿನಿಷ್ಠೆ, ಮಾಹಾತ್ಮ ಕಬೀರ್' 'ಅಕ್ಕಮಹಾದೇವಿ', ಮೊದಲಾದ ಐತಿಹಾಸಿಕ ನಾಟಕಗಳು ಪ್ರಸಿದ್ಧವಾದವು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಅತ್ಯಂತ ಯಶಸ್ವಿಯಾಗಿ ತಮ್ಮ ಮುಂದಾಳತ್ವದಲ್ಲಿ ಮಂಡಳಿಯನ್ನು ನಡೆಸಿದ ವೀರಣ್ಣನವರು ೧೯೪೦ರಲ್ಲಿ ಕನ್ನಡ ಚಲನಚಿತ್ರರಂಗಕ್ಕೆ ಪ್ರವೇಶ ಮಾಡಿದರು.

ಗಂಗಾಧರರಾವ್, ಎಂ.ವಿ. ಸುಬ್ಬಯ್ಯನಾಯ್ಡು, ರಾಜಮ್ಮ, ಬಿ.ಜಯಮ್ಮ, ಬಾಲಕೃಷ್ಣ ನರಸಿಂಹರಾಜು, ಡಾ|| ರಾಜ್‌ಕುಮಾರ್ (ಮುತ್ತುರಾಜ್). ಜಿ.ವಿ. ಅಯ್ಯರ್ ಬಿ.ವಿ. ಕಾರಂತ, ಹಿರಣ್ಣಯ್ಯ ಮೊದಲಾದ ನಟರನ್ನು ಗುಬ್ಬಿ ಕಂಪನಿಯು ಚಲಚಿತ್ರಕ್ಕೆ ಕೊಟ್ಟಿತು. ಹೀಗೆ ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಈ ಮಂಡಳಿಯು ಶಾಶ್ವತವಾದ ಹೆಸರನ್ನು ಗಳಿಸಿಕೊಂಡಿದೆ.

**(ಉ) ಶ್ರೀಕಂಠೇಶ್ವರ ಕರ್ನಾಟಕ ನಾಟಕ ಮಂಡಳಿ**

ಮೈಸೂರಿನ ಅರಮನೆಯ ನಾಟಕ ಮಂಡಳಿಯು ವೃತ್ತಿರಂಗಭೂಮಿಯಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿತ್ತು. ಇದರ ಪ್ರಭಾವದಿಂದಾಗಿ ರಂಗಾಚಾರ್ಯರು ಎ.ವಿ. ವರದಾಚಾರ್ಯರು ಹೊಸನಾಟಕ ಮಂಡಳಿಗಳನ್ನು ಹುಟ್ಟುಹಾಕಿ ಸಾರ್ವಜನಿಕರ ಪ್ರೋತ್ಸಾಹದಿಂದ ಒಳ್ಳೆಯ ಹೆಸರುಗಳಿಸಿದ್ದರು. ನಾಯಕ ನಟರಾದ ನರಸಿಂಹಯ್ಯನವರನ್ನು ಅರಮನೆಯ ಮಂಡಳಿಗೆ ಸೇರಿಸುವ ಪ್ರಯತ್ನಗಳು ವಿಫಲವಾದವು. ಇದೇ ಸಂದರ್ಭದಲ್ಲಿ ಎಸ್.ಎಸ್. ಸೆಟ್ಲೂರ್, ಟಿ. ಗೋಪಾಲ ಅಯ್ಯಂಗಾರ್ ಮುಂತಾದ ವಿದ್ವಾಂತರು ಬೆಂಗಳೂರಿನಲ್ಲಿ ನಾಟಕ ಸಂಘವನ್ನು ಹುಟ್ಟುಹಾಕಿ ಸುಲ್ತಾನ್ ಪೇಟೆಯ ಮುಸ್ಲಿಂಹಾಲ್‌ನ ಪಕ್ಕದ ನಿವೇಶನದಲ್ಲಿ ರಂಗಸಜ್ಜಿಕೆ ನಿರ್ಮಾಣಮಾಡಿ ನಾಟಕಗಳನ್ನು ಅಭಿನಯಿಸಿದರು.

ಬೆಂಗಳೂರಿನ ನಾಗರಿಕರು ನಾಟಕದ ಬಗ್ಗೆ ಆಸಕ್ತಿ ಬೆಳಸಿಕೊಂಡಿದ್ದರು. ಇದರಿಂದ ಪ್ರಭಾವಿತರಾದ ಎಂ.ಎಲ್. ಶ್ರೀಕಂಠೇಶಗೌಡರು ೧೮೯೫ರಲ್ಲಿ ತಮ್ಮ ಸ್ನೇಹಿತರಾದ ಪೂರ್ಣರಾಘವೇಂದ್ರರಾಯರ ಹಾಗೂ ಎಲ್. ಜಯರಾಯರ ನೆರವಿನಿಂದ 'ಶ್ರೀಕಂಠೇಶ್ವರ ಕರ್ನಾಟಕ ನಾಟಕ ಮಂಡಳಿಯನ್ನು ಸ್ಥಾಪಿಸಿದರು. "ಈ ಮಂಡಳಿಯವರು ಪ್ರದರ್ಶಿಸುತ್ತಿದ್ದ ನಾಟಗಳೆಂದರೆ 'ಸೀತಾಸ್ವಯಂವರ', 'ಘೋಷಯಾತ್ರೆ', 'ಪ್ರಮೀಳಾರ್ಜುನೀಯ' ಮತ್ತು 'ಹಿಂಸಾಪರ'. ಈ ಮಂಡಳಿಯಲ್ಲಿ ಸುಧರ್ಮಪಂಡಿತರು, ಅಣ್ಣಾಲಾಲ್, ನಾರಾಯಣಶಾಸ್ತ್ರಿ, ಕೃಷ್ಣಾಜಟ್ಟಪ್ಪ, ಮಹಾಲಿಂಗಪ್ಪ ಭೀಮಸೇನರಾವ್ ಮೊದಲಾದವರು ಹೆಸರು ಗಳಿಸಿದ್ದರು. ಇದು ೧೯೦೭ರ ವರೆಗೆ ತುಂಬ ಯಶಸ್ವಿಯಾಗಿ ಕೆಲಸಮಾಡಿತು." ವೃತ್ತಿರಂಗಭೂಮಿಯ ಆರಂಭದ ಕಾಲದಲ್ಲಿ ಮೈಸೂರಿನ ಉತ್ತರ ಕರ್ನಾಟಕದಲ್ಲಿ 'ಮರಾಠಿ ನಾಟಕ ಮಂಡಳಿಗಳ ಪ್ರಭಾವ ಹೆಚ್ಚಾಗಿತ್ತು. ಇದನ್ನು ಗಮನಿಸಿ ರಾಜಾಶ್ರಯ ಪಡೆದುಕೊಂಡ ನಾಟಕ ಮಂಡಳಿ ಮೈಸೂರಿನಲ್ಲಿ ಸ್ಥಾಪನೆಯಾಯಿತು. ಹಲವು ನಾಟಕ ಸಂಘಗಳ ಪೈಪೋಟಿಯನ್ನು ಇದು ಎದುರಿಸಬೇಕಾಯಿತು. ಎರಡನೆಯ ಕಾಲಘಟ್ಟದಲ್ಲಿ ವರದಾಚಾರ್, ವೀರಣ್ಣ ಮೊದಲಾದವರ ಗರಡಿಯಲ್ಲಿ ನಾಟಕ ಮಂಡಳಿಗಳು ಸ್ಥಾಪನೆಯಾಗಿ ಹೆಚ್ಚು ಹೆಸರು ಮಾಡಿದವು. ದಕ್ಷಿಣ ಭಾರತದ ಪ್ರಮುಖ ಪಟ್ಟಣಗಳಲ್ಲಿ ನಾಟಕಗಳನ್ನು ಪ್ರದರ್ಶಿಸುತ್ತ ವೃತ್ತಿರಂಗಭೂಮಿಗೆ ಜೀವಂತಿಕೆ ತುಂಬಿದರು.

ಮೂರನೆಯ ಕಾಲಘಟ್ಟದಲ್ಲಿ ಸಿನಿಮಾ ಪ್ರಭಾವದಿಂದಾಗಿ ಪ್ರೇಕ್ಷಕರ ಕೊರತೆಯನ್ನು ಎದುರಿಸಬೇಕಾಯಿತು. ಕಲಾವಿದರು ಕೂಡ ಚಲನಚಿತ್ರ ರಂಗದ ಕಡೆಗೆ ಆಕರ್ಷಿತರಾದರು. ಸ್ವಾತಂತ್ರ್ಯೋತ್ತರದ ಕಾಲಘಟ್ಟದಲ್ಲಿ ವೃತ್ತಿ ನಾಟಕಗಳ ಯಜಮಾನಿಕೆ ಯುವಕರ ಕೈಸೇರಿತು. ಸರ್ಕಾರವು ಅಕಾಡೆಮಿಗಳ ಮೂಲಕ ರಂಗಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿತು. ಬಿಸಿರಕ್ತದ ಯುವಕರು ಯಾವುದೇ ರೀತಿಯ ಸ್ಪರ್ಧೆಗಳನ್ನು ಎದುರಿಸಿ ರಂಗ ಪ್ರಯೋಗಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

**ಆಕರ ಗ್ರಂಥಗಳು**

೧. ಡಾ॥ ಮರುಳ ಸಿದ್ದಪ್ಪ, ಕೆ.ಗ್ರಂ: ಆಧುನಿಕ ಕನ್ನಡ ನಾಟಕ,
೨. ಡಾ॥ ರಂಗನಾಥ್ ಹೆಚ್.ಕೆ. ಗ್ರಂ : ಕರ್ನಾಟಕ ರಂಗಭೂಮಿ
೩. ರಂಗಣ್ಣ ಎಸ್.ವಿ. ಗ್ರಂ : ಪಾಶ್ಚಾತ್ಯ ಗಂಭೀರ ನಾಟಕಗಳು
೪. ಶಾಮರಾಯ ತ.ಸು. ಗ್ರಂ : ಕನ್ನಡ ನಾಟಕ
೫. ಚಂದ್ರಶೇಖರ ಕಂಬಾರ (ಸಂ). ಗ್ರಂ : ಕನ್ನಡ ನಾಟಕ ಸಂಪುಟ

■

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೪

# ೧೧. ರ, (ರೇಫ) ಱ, ೞ, ಳ (ಕುಳ, ಕ್ಷಳ)

–ಡಾ. ಉಪ್ಪಂಗಳ ರಾಮಭಟ್ಟ*

ಭಾಷೆ ನಿತ್ಯ ಪರಿವರ್ತನಶೀಲವಾದುದೆಂಬುದು ಕನ್ನಡದ ಅವಸ್ಥಾಂತರಗಳನ್ನು ನೋಡಿದರೆ ಸ್ಪಷ್ಟವಾಗುತ್ತದೆ. ಈ ಪರಿವರ್ತನೆಗೆ ಧ್ವನಿ ವ್ಯತ್ಯಾಸವೇ ಬಹಳ ಮುಖ್ಯವಾದ ಕಾರಣ. ಅವಶ್ಯವಾದ ಸಾರ್ಥಕ ಧ್ವನಿಮಾಗಳೇ (Phoneme) ಭಾಷೆಯ ಮೂಲಾಧಾರ. ಇವುಗಳಲ್ಲಾದ ಬದಲಾವಣೆ ಸಮಸ್ತ ಭಾಷೆಯ ಮೇಲೆ ಪ್ರಭಾವ ಬೀರಿಯೇ ತೀರುತ್ತದೆ. ಧ್ವನಿವ್ಯತ್ಯಾವಾಗುವಾಗ ಎ) ಒಂದು ಧ್ವನಿಯಾ ಸಾಮ್ಯವಿರುವ ಇನ್ನೊಂದು ಧ್ವನಿಮಾದಲ್ಲಿ ಲೀನವಾಗಬಹುದು. ಬಿ) ಪ್ರತಿಯೊಂದರ ಸ್ಪಷ್ಟತೆಯು ಕಡಿಮೆಯಾಗುವ ಹಂತದಲ್ಲಿ ಒಂದರ ಬದಲು ಇನ್ನೊಂದು ಬಳಕೆಯಾಗಬಹುದು. ಸಿ) ನಷ್ಟವಾದ ಒಂದು ಧ್ವನಿಯ ಬದಲು ಬೇರೆಯೇ ಒಂದು ಧ್ವನಿ ಸೇರಲೂ ಬಹುದು.

ಮೇಲೆ ಹೇಳಿದವುಗಳಲ್ಲಿ ಱ, ಕಾರವು ರೇಫದಲ್ಲಿ ೞ, ಕ್ಷಳಗಳು (ಳ) ಕುಳದಲ್ಲಿ (ಳ) ಐಕ್ಯವಾಗಿವೆ. ಈಗ ನಮ್ಮ ಭಾಷೆಯಲ್ಲಿ ಆ ವರ್ಗದಲ್ಲಿ ರ, ಳಗಳು ಉಳಿದುಕೊಂಡು ಅವುಗಳ ಸಾಮ್ಯವುಳ್ಳ ಹಳೆಧ್ವನಿಗಳ ಕೆಲಸವನ್ನು ಮಾಡುತ್ತವೆ. ಭಾಷಾ ವಿಜ್ಞಾನಿಗಳು, ಸಂಶೋಧಕರು ಈ ವರ್ಣಗಳ ಬಗೆಗೆ ಸಾಕಷ್ಟು ಚಿಂತನಮಂಥನಗಳನ್ನು ನಡೆಸಿದ್ದಾರೆ.

**ರ, ಱ,** ‘ರ’ಕಾರಕ್ಕೆ ರೇಫವೆಂಬ ಹೆಸರು ಅನ್ವರ್ಥವಾಗಿ ರೂಢಿಯಲ್ಲಿ ಬಂದಿದೆ. ರ್+ಏಫ = ರೇಫ!’ ವಸ್ತ್ರವನ್ನು ಹರಿಯುವಾಗ ಆಗತಕ್ಕಂತಹ ‘ರಿಫ್’ ಎಂಬಂತೆ ಉಚ್ಚರಿಸತಕ್ಕ ಧ್ವನಿ ಎಂಬುದರಿಂದ ಇದಕ್ಕೆ ರೇಫವೆಂಬ ಹೆಸರು.[೨] ಅದೇ ಹೆಸರನ್ನು ಕನ್ನಡದಲ್ಲೂ ಬಳಸಲಾಗುತ್ತಿದೆ. ಅದಕ್ಕೆ ಸಮಾನವಾದ ಅಥವಾ ಅದೇ ಧ್ವನಿ ಕನ್ನಡದಲ್ಲೂ ಇರುವುದರಿಂದ ರಕಾರ ಎಂದರೂ ತಪ್ಪೇನೂ ಆಗಲಾರದು. ಆದರೆ ‘ಱ’ವನ್ನೂ ಱಕಾರವೆನ್ನುವಾಗ ಕಿವಿಗೆ ಎರಡೂ ಒಂದೇ ಎಂಬ ಭಾವನೆ ಬರುವುದಿರಂದ ರೇಫ ಮತ್ತು ಱಕಾರ ಎಂದು ಬೇರ್ಪಡಿಸಿ ಹೇಳಲಾಗುತ್ತದೆ. ಱಕಾರವನ್ನು ಅದರ ಸ್ವರೂಪ

* ನಿವೃತ್ತ ಪ್ರಾಧ್ಯಾಪಕರು, ಪ್ರೊ.ರಾ. ಗೋ. ಸಂ.ಕೇಂದ್ರ, ಅಧ್ಯಕ್ಷರು, ಅಕಲಂಕ ಪ್ರತಿಷ್ಠಾನ (ರಿ) ಪರಾಶರ ೮–೧–೬೪ ಜಿ.ಸುಧೀಂದ್ರ ತೀರ್ಥ ಮಾರ್ಗ ಕುಂಜಿಬೆಟ್ಟು, ಉಡುಪಿ – ೫೭೬೧೦೨.
ದೂ: ೦೮೨೦–೨೫೨೯೯೬೦

ನೋಡಿ 'ಶಕಟ ರೇಫ' ಅಥವಾ ಬಂಡಿಯ ಱ ಎನ್ನವುದೂ ಇದೆ. ಎರಡು ಗಾಲಿಗಳನ್ನು ಅಕ್ಷದಿಂದ ಜೋಡಿಸಿದಂತೆ 'ಱ' ಕಾರದ ರೂಪ ಇರುವುದರಿಂದ. ರೂಪ ಸಾಮ್ಯದ ದೃಷ್ಟಿಯಿಂದ ಹೇಳುವುದಿದ್ದರೆ ಶ್ರೀ ಸೇಡಿಯಾಪು ಕೃಷ್ಣಭಟ್ಟರು ಸೂಚಿಸಿದ 'ಅಱ ಎಂಬ ಹೆಸರೇ ಶಕಟರೇಫ ಎನ್ನವುದಕ್ಕಿಂತ ಸೂಕ್ತವಾದುದರಿಂದ (ಅ ದಂತೆ ಱ ಇರುವುದರಿಂದ) ಇನ್ನು ಮುಂದೆ 'ಅಱ' ಎಂದೇ ಹೆಸರಿಸಬಹುದು. ಅಱ ಎಂದರೆ ಕಬ್ಬಿಣದ ಚೂರಿ ಮೊದಲಾದವನ್ನು ಹರಿತಮಾಡುವ ವಸ್ತು ಎಂಬ ಗೊಂದಲಕ್ಕೆ ಇಲ್ಲಿ ವ್ಯಾಕರಣದಲ್ಲಿ ಎಡೆಯಿಲ್ಲ. ರ,ಱಗಳು ಕನ್ನಡದಲ್ಲಿ ಸ್ವತಂತ್ರಧ್ವನಿಮಾಗಳಾಗಿದ್ದುವು. 'ರ'ವು ಕನ್ನಡದ ಸ್ವತಂತ್ರ ಧ್ವನಿಯಾಗಿದ್ದೂ ಸಂಸ್ಕೃತದ ರೇಫದ ಪ್ರತಿನಿಧಿಯೂ ಆಗಿದೆ. ಆದ್ದರಿಂದಲೇ ಅದರ ಹೆಸರನ್ನೇ ಇದಕ್ಕೆ ಕೊಡಲಾಗಿದೆ. ಆದರೆ ಕನ್ನಡದ, ದ್ರಾವಿಡಭಾಷೆಗಳ ಸ್ವತಂತ್ರ ಧ್ವನಿ. ಇವೆರಡಕ್ಕೂ ಪ್ರತ್ಯೇಕ ಅರ್ಥಕೊಡುವ ಶಕ್ತಿಯಿದ್ದು ಈಗ 'ರ'ದಲ್ಲಿ 'ಱ'ವು ಐಕ್ಯವಾಗಿದೆ.

ಉದಾ:– ಅಱಿದು (ತಿಳಿದು) ಅರಿದು (ಅಸಾಧ್ಯ), ಕಱೆ (ಹಾಲು, ಮಳೆ, ಕಲೆ) ಕರೆ (ಬದಿ, ಆಹ್ವಾನ) ಈಗ ಎಲ್ಲಾ ಕಡೆಯಲ್ಲೂ 'ರ'ವನ್ನೇ ಬಳಸಲಾಗುತ್ತದೆ. ರೇಫದ ಉಚ್ಚಾರದ ಬಗೆಗೆ ಸಂಸ್ಕೃತ ವ್ಯಾಕರಣಗಾರರಲ್ಲೇ ಮತ ಭೇದವಿದೆ. ಈ ಕುರಿತು ಸಿದ್ಧೇಶ್ವರ ವರ್ಮಾ ಅವರು "ಪ್ರಾತಿಶಾಖ್ಯಗಳು ರೇಫವನ್ನು ದಂತ್ಯ ಅಥವಾ ವರ್ತ್ಸ್ಯ ಎನ್ನುತ್ತವೆ. ಪಾಣಿನೀಯ ಶಿಕ್ಷೆಯಲ್ಲಿ ಮೂರ್ಧಾ (ಸೆರೆಬ್ರಲ್) ಎಂದು ಹೇಳಿದೆ[೩] ಎಂದು ತಿಳಿಸಿದ್ದಾರೆ. ಶ್ರೀ ಡೇನಿಯಲ್ ಜೋನ್ಸ್ ಅವರು ರೇಫದಲ್ಲಿ ಆರು ವಿಧವೆಂಬುದನ್ನು ಪ್ರಗೊ.ಕುಲಕರಣಿ ಜ್ಞಾಪಿಸಿದ್ದನ್ನು[೪] ನೋಡಿದರೆ ಮೂರ್ಧನ್ಯರೇಫವೂ ಅವುಗಳಲ್ಲೊಂದು ಇದ್ದರಿಬಹುದೆನ್ನಿಸುತ್ತದೆ. ರೇಫವು ನಾಲಿಗೆಯ ತುದಿಯ ಮಧ್ಯಭಾಗದಿಂದ ದಂತಮೂಲದ ಮೇಲ್ಭಾಗವನ್ನು ಸ್ಪರ್ಶಿಸುವಾಗ ಉಂಟಾಗುತ್ತದೆ. ಅಂದರೆ ವರ್ತ್ಸ್ಯ ಸ್ಥಾನವೆಂದು ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಹೇಳಿದೆ[೫] ರೇಫೆಯನ್ನು ಉಚ್ಚರಿಸಿ ನೋಡಿದರೆ ಇದೇ ಸರಿಯೆನ್ನಬಹುದು. ಆದ್ದರಿಂದಲೇ "ರೇಫ ನಿಶ್ಚಯವಾಗಿಯೂ ದಂತ್ಯ ಇಲ್ಲವೇ ದಂತ ಮೂಲೀಯವಲ್ಲದೆ ಮೂರ್ಧನ್ಯವಲ್ಲ"[೬] ಎಂಬ ಮಾತು ಸತ್ಯಕ್ಕೆ ಸಮೀಪವಾಗಿದೆ ಎನ್ನಬಹುದು. ಋಗ್ವೇದ ಪ್ರಾತಿಶಾಖ್ಯದಲ್ಲಿ "ರೇಫವನ್ನು ಕೆಲವರು ವರ್ತ್ಸ್ಯವೆನ್ನುತ್ತಾರೆ" ಎಂದು ಅದನ್ನು ಸ್ವೀಕರಿಸಲಾಗಿದೆ.[೭] 'ಮರ' ಮೊದಲಾದ ಶಬ್ದಗಳಲ್ಲಿರುವ 'ರ'ವು ದಂತ್ಯ, ತಮಿಳಿನಲ್ಲಿ ಬರುವ ನ್ರ, ಟ್ರಗಳಲ್ಲಿ ವರ್ತ್ಸ್ಯ 'ರ' ಕಾರ, ಇಂಗ್ಲಿಷಿನಂತೆ ಎಂದು ಸಿ.ಆರ್. ಶಂಕರನ್ ಅಭಿಪ್ರಾಯ ಪಟ್ಟಿದ್ದಾರೆ[೮].

ಕೇಶಿರಾಜನು "ರೇಫೆಮೂರ್ಧನ್ಯಂ ಱಕಾರಂ ಅದರೊಳ್ ಏಕಸ್ಥಾನಿ" ಎಂದು "ಅತಿಪೀಡನದಿಂದ ರೇಫಾಶ್ರಿತಮಾದ ಱಕಾರಮುಂ" ಎಂದೂ ಎರಡನ್ನೂ ಸಮಾನವಾಗಿ ಮೂರ್ಧನ್ಯ ಎಂದಿದ್ದಾನ್. ಭಾಷಾಭೂಷಣಕಾರನು ಲರಡೈರೇವ ಳಱಱಾ (ಸೂ ೧೦.) ಲ–ಳ, ರ–ಱ, ಡ–ಟ ಎಂದು ಸಮಾನತೆಯನ್ನು ಹೇಳಿದ್ದಾನೆ. ಶಬ್ದ ಸ್ಮೃತಿಯಲ್ಲೂ ಲರಡ ಗ್ರಹಣದೆ ಳಱಟಾಕ್ಷರಮಕ್ಕುಂ ಪೀಡನ ಪ್ರಯತ್ನಾಶ್ರಯದಿಂ" ಎಂದೂ (ಸೂ.

೯) ಅದೇ ಅಭಿಪ್ರಾಯವಿದೆ. ಕನ್ನಡದ ಪ್ರಾಚೀನ ವೈಯಾಕರಣರು ಸಂಸ್ಕೃತ ವ್ಯಾಕರಣಗವನ್ನು ಅನುಸರಿಸಿದ್ದಾರೆ. ರೇಫವು ವರ್ತ್ಸ್ಯವೆಂಬುದು ಉಚ್ಚಾರದಿಂದಲೇ ಸ್ಪಷ್ಟ. 'ಱ'ವು ರೇಫಕ್ಕಿಂತ ಸ್ವಲ್ಪ ಭಿನ್ನವಾಗಿ ತಿರ್‍ರನೆ (ತಿಱ್ಱನೆ) ಉಚ್ಚರಿಸುವಾಗ ಆಗುವಂತೆ ಇನ್ನೂ ಸ್ವಲ್ಪ ಮೇಲಕ್ಕೆ ನಾಲಗೆ ಮಡಚಿ ಉಚ್ಚರಿಸಿದಾಗ ಹುಟ್ಟತಕ್ಕದ್ದು.

ಕರ್ಣಾಟಕ ಶಬ್ದಾನುಶಾಸನದಲ್ಲಿ ರ, ಱ,ೞ ಗಳನ್ನು ವರ್ಣಮಾಲೆಯಲ್ಲಿ ಸೇರಿಸಿದ್ದರೂ ಇವುಗಳ ಬಗೆಗೆ ಹೆಚ್ಚಿನ ವಿವರಣೆಯಿಲ್ಲ. ಅವನದೃಷ್ಟಿಯಲ್ಲಿ ರ–ಱ ಗಳು ಅಂತೆಯೇ –ೞ, ಕುಳ, ಕ್ಷಳಗಳು ವ್ಯತ್ಯಾಸವಿಲ್ಲ. ಅವನಕಾಲಕ್ಕೆ ಱ,ವು'ರ'ದಲ್ಲಿ ೞ, ಕುಳ, ಕ್ಷಳಗಳು 'ಳ'ದಲ್ಲಿ ಐಕ್ಯವಾಗಿ ಆಗಿದೆ. "ಡೋ ಬಹುಲಂ" (ಸೂ.೧೪೦ ಪುಟ ೧೬೨)ಎಂಬ ಸೂತ್ರದ ಕೆಳಗೆ ವ್ಯಾಖ್ಯಾನದಲ್ಲಿ ಶಬ್ದಮಣಿ ದರ್ಪಣ ಕಾರನ ಅಭಿಪ್ರಾಯವನ್ನೇ ನಿರವಿಸಲಾಗಿದೆ. ಅವನು "ಱ ಡೋರ್ದೋ್ ಱೞಂ ವ್ಯಂಜನೇ (ಸೂ. ೮೨ ಪುಟ ೧೧೯) ಎಂಬ ಸೂತ್ರದಲ್ಲಿ ಱ ಕ್ಕೆ ರ, ಡ ಕ್ಕೆ ೞ ಬರುತ್ತದೆಂದು ಬೇಸಱು+ನುಡಿ – ಬೇಸರ್ನುಡಿ.ನೂಱು+ಸಾಸಿರ–ನೂರ್ಸಾಸಿರ, ಕಾಡು+ಕಿಚ್ಚು–ಕಾೞ್ಕಿಚ್ಚು ಕೋಡು+ಕುಟ್ಟು – ಕೋೞ್ಕುಟ್ಟು ಎಂದು ಉದಾಹರಿಸಿದ್ದಾನೆ. ಅದರ ವಿಷಯದಲ್ಲಿ ಹೆಚ್ಚಿನ ವಿಚಾರಕ್ಕೆ ಆಸ್ಪದವಿಲ್ಲ, 'ಱ'ವು ಒಮ್ಮೆ ಇದ್ದು ಈಗ ಇಲ್ಲವಾದುದರಿಂದ ವಿಚಾರಣೀಯವಾಗಿದೆ. ಱ ಕಾರವು ಪದಮಧ್ಯದಲ್ಲಲ್ಲದೆ ಪದಾದಿ ಪದಾಂತ್ಯಗಳಲ್ಲಿ ಕಂಡುಬರುವುದಿಲ್ಲ. ಕಿಟ್ಟೆಲ್ ಕೋಶದಲ್ಲಿ ಕೆಲವು ಱ ಕಾರಾದಿಯಾದ ಶಬ್ದಗಳಿದ್ದರೂ ಅವು ರೇಫದ ಬದಲಾಗಿ ಎಂದಿರಬಹುದು. ಉದಾ: ಱಾಟಳ, ಱೋಡಿಸು-----

'ಱ'ವು ದ್ರಾವಿಡ ಭಾಷೆಗಳಲ್ಲೆಲ್ಲಾ ಇರುವ ಧ್ವನಿ. ಇದರ ಉಚ್ಚಾರ ಮತ್ತು ಪ್ರಯೋಜನಗಳಲ್ಲಿ ವೈವಿಧ್ಯವಿರಬಹುದು.

"ಹನ್ನೊಂದನೇ ಶತಮಾನದವರೆಗೆ 'ಱ' ಉಳಿದುಕೊಂಡು ಬಂದಿದೆ. ಕ್ರಿ.ಶ. ೧೧೭೬ ಶಾಸನವೊಂದರಲ್ಲಿ 'ಱ'ದ ಬದಲು 'ರ' ಕಂಡುಬಂದಿದೆ. ಹದಿಮೂರನೇ ಶತಮಾನದ ಕೊನೆಯವರೆಗೆ ಈ ವ್ಯತ್ಯಾಸ ಅಲ್ಪವಾಗಿ ಕಾಣುತ್ತದೆ. ಹದಿನೇಳನೇ ಶತಮಾನದ ಒಂದೇ ಶಾಸನದಲ್ಲಿ ಹಳೆಗನ್ನಡದ 'ಱ'ದ ಸ್ಥಾನದಲ್ಲಿ ಎರಡು ಜಾತಿಯವುಗಳ ಪ್ರಯೋಗವಾಗಿದ್ದು ಕಂಡು ಬಂದಿದೆ. ಹದಿನೆಂಟನೇ ಶತಮಾನದ ಕೊನೆಗೆ 'ಱ' ಸಂಪೂರ್ಣವಾಗಿ ಮಾಯವಾಗಿದೆ.[೧೦]

"ಹನ್ನೊಂದನೇ ಶತಮಾನದವರೆಗೆ 'ಱ' ಉಳಿದುಕೊಂಡಿದ್ದು ಹನ್ನೆರಡನೇ ಶತಮಾನದಲ್ಲಿ 'ಱ'ದ ಬದಲು 'ರ' ಪ್ರಯೋಗವನ್ನು ಕಾಣುತ್ತೇವೆ"[೧೧] ಎಂದು ಮೇಲಿನ ಅಭಿಪ್ರಾಯವನ್ನೇ ಡಾ.ಜಿ.ಎಸ್. ಗಾಯಿ ಅವರೂ ತಿಳಿಸಿದ್ದಾರೆ. 'ಱ' ಕಾರದ ಉಚ್ಚಾರ ಹೇಗಿತ್ತೆಂದು ಈಗ ಹೇಳುವುದು ಕಷ್ಟ. ತಮಿಳರು ಮತ್ತು ಮಲಯಾಳಿಗಳಲ್ಲಿ ಇನ್ನೂ ಅದರ ಉಚ್ಚಾರಣೆಯಿದ್ದರೂ ಪ್ರಾಚೀನ ಕಾಲದಲ್ಲೂ ಅದು ಹಾಗೇ ಉಚ್ಚರಿಸ್ಪಡುತ್ತಿತ್ತೆಂದು ಹೇಳುವುದು ಕಷ್ಟ. ಆದರೂ ಈಗಿನ ಅವರ ಉಚ್ಚಾರದ ಹಿನ್ನೆಲೆಯಲ್ಲಿ ಹಿಂದಿನ ಉಚ್ಚಾರವನ್ನು ಊಹಿಸಬಹುದು– "ಱ ಕಾರದ ಉಚ್ಚಾರ ಟ, ತಗಳಿಗೆ ಮಧ್ಯಸ್ಥವಾದ

ಉಚ್ಚಾರದ ಮುಂದೆ ರೇಫವನ್ನು ಸೇರಿಸಿ ಉಚ್ಚರಿಸಿದಂತೆ ಆಗುತ್ತಿರಬೇಕು. ಱ ಕಾರವು ದ್ವಿತ್ವಹೊಂದಿದಾಗ ತಮಿಳಿನಲ್ಲಿ ಅದರ ಉಚ್ಚಾರ ಟ್ರ, ತ್ತ ಎಂಬಂತಾಗುತ್ತದೆ. ಱ ಕಾರದ ಮೊದಲು ಅನುಸ್ವಾರ, ಅರ್ಧಾನುಸ್ವಾರಕ್ಕೆ ಸಮಾನವಾಗಿರುವ ನಕಾರ (ಱ ನ್ನಗರ) ವಿದ್ದಾಗ ಅದರ ಉಚ್ಚಾರ 'ನ್ದ್ರ' ಎಂಬಂತಾಗುತ್ತದೆ. ತಮಿಳಿನಲ್ಲಿ ದ್ವಿತ್ವ ಱ ಕಾರವಿದ್ದಲ್ಲಿ ಕನ್ನಡ ತೆಲುಗುಗಳಲ್ಲಿ ತ.ತ್ತ,ಟ್ಟ ಇದ್ದುದು ಕಂಡು ಬರುತ್ತದೆ [೧೨]

ಏತ (ಕ) ಏಱ್ಱಂ (ತ) ಏತಮು (ತೆ)

ಕಟ್ಟೆ (ಕ) ಕಱ್ಱಯ್ (ತ) ಕಟ್ಟ (ತೆ)

ಕುತ್ತ (ಕ) ಕುಱ್ಱಮ್ (ತ) ಕುಡಿ (ತೆ)

ಕೊಂದು (ಕ) ಕೊನ್ಱು (ತ)

ಇಂದು (ಕ) ಇನ್ಱು (ತ)

ತಮಿಳಿನಲ್ಲಿದಂತೆ 'ಏತ್ತ್ರಂ' ಎಂಬ ಮೂಲ ದ್ರಾವಿಡದ ರೂಪ ಕನ್ನಡ ತೆಲುಗುಗಳಲ್ಲಿ ಏತ ಎಂದೂ ಕೊನ್ದ್ರು ಎಂಬಂತಿರುವ ಉಚ್ಚಾರ ಕೊಂದು ಎಂದೂ ಮಾರ್ಪಟ್ಟಿರಬಹುದು. ತಮಿಳಿನಲ್ಲಿ ಱ ಎಂದು ಬರೆದರೂ ಟ್ರ, ಟ್ಟ, ಅಥವಾ 'ತ್ತ' ಎಂಬಂತೆ ಹಲವೆಡೆ ಉಚ್ಚರಿಸಲಾಗುತ್ತದೆಂದು ತಮಿಳು ಡಿಕ್ಶನರಿಗಳಲ್ಲಿ ಒಂದೇ ಅರ್ಥದ ಶಬ್ದ ಱ್ಱ ಉಳ್ಳದ್ದಾಗಿಯೂ 'ತ್ತ' ಉಳ್ಳದಾಗಿಯೂ ಕಂಡು ಬರುತ್ತದೆಂದೂ ಶ್ರೀ ನರಸಿಂಹಯ್ಯನವರು ತಿಳಿಸುತ್ತಾರೆ.[೧೩] ತಮಿಳಿನಲ್ಲಿರುವ ಕಿಟ್ರಡಿಯೇ ಕನ್ನಡದಲ್ಲಿ ಕಿತ್ತಡಿಯಾಗಿಯೂ ಆಗಿರಬಹುದು. ಹಳಗನ್ನಡದಲ್ಲಿ 'ಱ್ಱ' ವು ತ್ತ, ಆದಂತೆ ತೋರುತ್ತದೆ. ಮಲಯಾಳದಲ್ಲಿ ದ್ವಿತ್ವ ಱ ಕಾರವನ್ನು '೧೧' ಎಂಬತೆ ಬರೆದು 'ಟ್ಟ' ಎಂಬತೆ ಉಚ್ಚರಿಸಲಾಗುತ್ತದೆ. ಸಾಧಾರಣ ತಮಿಳಿನಂತೆ ಱ ಮತ್ತು ರ ದ ಭೇದವು ಕಾಲಕ್ರಮದಲ್ಲಿ ಕಡಿಮೆಯಾಗುತ್ತಾ ಅಸ್ಪಷ್ಟತೆ ತೋರಿ ಒಂದರ ಬದಲು ಒಂದು ಬರೆಯಲಾಗಿ ಕೊನೆಗೆ ಸಂಪೂರ್ಣ ಱ ಕಾರದ ಅಸ್ತಿತ್ವವೇ ಇಲ್ಲದಾಗಿರಬೇಕು. ಈ ಮರೆಯಾಗುವ ಸ್ಥಿತಿಯಲ್ಲಿದ್ದ ಧ್ವನಿಗಳನ್ನು ಉಳಿಸಲು ಕೇಶಿರಾಜ ಸಾಕಷ್ಟು ಪ್ರಯತ್ನಿಸಿದ್ದಾನೆ. ಹಳಗನ್ನಡ ಶಾಸನಗಳಲ್ಲಿ ಱ ಕಾರವಿದ್ದಲ್ಲಿ ೞ ಕಾರವು ಕಂಡು ಬರುವುದರಿಂದ ಇವುಗಳ ಉಚ್ಚಾರಣೆಗೆ ಸಾಮ್ಯವಿತ್ತೆಂದೂಹಿಸಲು ಅವಕಾಶವಿದೆ.–

ಱ ದ ಬದಲು ೞ ೯ನೇ ಶತಮಾನದ ಏಳ್ನೂೞ್

ಱ ದ ಬದಲು ೞ ೮ನೇ ಶತಮಾನ ಇೞ್ಚಾಸಿರ ೧೪

ಕೇಶಿರಾಜನು "ಪಿರಿಯರ್ ಸಲಿಪರ್ ದಡ್ಡಕ್ಕರದ ಱ ೞ ಕ್ಕೈದೆ ರೇಫೆವೆರೆಸಿದ ದಡ್ಡಕ್ಕರಮಂ" (ಸೂ ೩೪, ಪು.೩೪) ಎಂದಿರುವುದು ಈ ಮಾತನ್ನು ಬಲಪಡಿಸುತ್ತದೆ. "ಚುರ್ಚಿದ ಕಿಮುೞ್ಚಿದ–" ಎಂಬಂತಹ ಉದಾಹರಣೆಯಲ್ಲಿ ರೇಫದ ಒತ್ತಕ್ಷರಕ್ಕೆ ಱ ೞ ದ ಒತ್ತಕ್ಷರದ ಪ್ರಾಸವನ್ನು ಸ್ವೀಕರಿಸುವುದರಿಂದ ರೇಫ ಮತ್ತು ಱ ೞ ಗಳಿಗೆ ಧ್ವನಿ

ಸಾಮ್ಯವಿದ್ದಿರಬೇಕೇನೋ. ಇಂತಹ ಉದಾಹರಣೆಗಳೂ ಕಡಿಮೆಯಿರುವುದರಿಂದ ಇದನ್ನು ಪ್ರಮಾಣವಾಗಿ ಸ್ವೀಕರಿಸಲು ಸಾಧ್ಯವಿಲ್ಲ. ೞ ಮತ್ತು ೞ ರಲಗಳ ಉಚ್ಚಾರ ತೀರ ಭಿನ್ನವೆಂದು ನಮಗೀಗಲೂ ಸ್ಪಷ್ಟವಿರುವುದರಿಂದ ಱ ರಗಳೇ ಹೆಚ್ಚು ಸಾಮ್ಯವುಳ್ಳವಾದ್ದರಿಂದ ಱ ವು 'ರ' ದಲ್ಲೇ ಐಕ್ಯಹೊಂದಿತು. ೞ ದುರ್ಬಲವಾದ್ದರಿಂದಲೇ ಅದು 'ಳ' ದಲ್ಲಿ ಅದರ ಸಮೂಹ ಧ್ವನಿಯಲ್ಲಿ ಐಕ್ಯವಾಯಿತು. ದ್ವಿತ್ವಾಕ್ಷರಗಳಲ್ಲಿ ಮೊದಲಿನದರ ಉಚ್ಚಾರ ಅಸ್ಪಷ್ಟ ಮತ್ತು ಧ್ವನ್ಯಂಗಕ್ಕೆತ್ರಾಸದಾಯಕವಾದಾಗ ಅದು ಶಿಥಿಲ ದ್ವಿತ್ವವಾಗತೊಡಗಿ ಮತ್ತು ಹಲಕಾಲದ ನಂತರ ಅದು ಸಂಪೂರ್ಣಮಾಯವಾಗಿ ಸಜಾತೀಯ ದ್ವಿತ್ವವೇ ಆಯಿತು. ಉದಾ– ಗಱ್ದೆ–ಗರ್ದೆ–ಗದ್ದೆ, ಉೞ್ದು–ಉರ್ದು–ಉದ್ದು, ಆದುದರಿಂದ "ಅಲ್ಪಸ್ಪರ್ಶಕಗಳನ್ನು ಉಚ್ಚರಿಸುವಾಗ ಅವುಗಳ ಉಚ್ಚಾರಣೆ (ಱ ೞ) ಪೂರ್ಣವಾಗುವುದಿಲ್ಲ...ಹೀಗೆ ಱ ೞಾದಿಗಳಿಗೆ ಪ್ರಾಧಾನ್ಯವಿಲ್ಲದೆ ಅವು ಅವಕ್ಕಿಂತ ಮೊದಲಿನ ಸ್ವರಗಳಲ್ಲೇ ಐಕ್ಯವಾಗುತ್ತದೆ"[೧೩] ಎಂಬ ಶ್ರೀಕುಶಾಲಪ್ಪ ಗೌಡರ ಮಾತು ಸಾರ್ಥಕವೆನಿಸುತ್ತದೆ.

**ೞ,ಳ**– ೞ ಕಾರವು ಶಬ್ದಾದಿಯಲ್ಲಿ ಕಾಣುವುದಿಲ್ಲ. ಶಬ್ದಗಳ ಮಧ್ಯ ಅಂತ್ಯಗಳಲ್ಲಿ ಕಂಡುಬರುತ್ತದೆ. ಸ್ವರಗಳ ಮಧ್ಯದಲ್ಲಿ ಬಂದಾಗ ಅದರಲ್ಲಿ ಲೀನವಾಗಿದೆ. ಇದು ಕನ್ನಡ ಮತ್ತಿತರ ದ್ರಾವಿಡ ಭಾಷೆಗಳ ಸ್ವತಂತ್ರ ಧ್ವನಿಮಾ. ಈಗ ತಮಿಳು ಮಲಯಾಳಗಲ್ಲಿ ಮಾತ್ರ ಉಳಿದುಕೊಂಡು ಕನ್ನಡ, ತೆಲುಗು, ತುಳುಗಳಲ್ಲಿ ಕಣ್ಮರೆಯಾಗಿದೆ. ಈಗ ಕನ್ನಡದಲ್ಲಿ ೞ ಸಂಪೂರ್ಣವಾಗಿ ಳ ದಲ್ಲಿ ಲೀನವಾಗಿದೆ. ಇದು ಮೂಲ ದ್ರಾವಿಡದ ಧ್ವನಿಮಾ ಎನ್ನುವುದರಲ್ಲಿ ಸಂದೇಹವಿಲ್ಲ. ಸಂಸ್ಕೃತದಲ್ಲಿ ಱ,ಳ ಎರಡೂ ಇಲ್ಲ. ಕೇವಲ ಲ ಮಾತ್ರವಿದೆ. ಱ ೞ, ಕ್ಷಳಗಳು ಮುಂದೆ ವರ್ಣಮಾಲೆಯಲ್ಲಿ ಸೇರಿಕೊಂಡುವು; ಮೊದಲು ಇರಲಿಲ್ಲವೆಂದು ಶ್ರೀಜಿ.ಬೂಲರ್ ಅವರು ಹೇಳುತ್ತಾರೆ[೧೪] ಪಾಣಿನೀಯ ಚತುರ್ದಶ ಸೂತ್ರಗಳಲ್ಲಿ 'ಳ' ಕಾರವಿಲ್ಲ. ಆದರೆ ವೈದಿಕ ಸಂಸ್ಕೃತದಲ್ಲಿ ೞ ಕಾರವಿದ್ದುದು ಕಂಡುಬರುತ್ತದೆ. –"ಅಗ್ನಿ ಮೀೞೇಹಿ ಪುರೋಹಿತಂ ಯಜ್ಞಸ್ಯದೇವಮೃತ್ವಿಜಂ / ಹೋತಾರಂ[೧೫] ರತ್ನಧಾತಮಂ" ೞೇ ಇಲ್ಲಿ ಸ್ತುತ್ಯರ್ಥಕವಾದ 'ಈಡೇ' ಈ ಎಂದಾಗಿದೆ. ಇದು 'ೞ'ವೇ 'ಳ' ವೇ?'ಡ' ಕಾರದ ಸ್ಥಾನದಲ್ಲಿ ಬರುವುದರಿಂದ ಅದರ ಸಸ್ಥಾನೀಯವಾದ 'ೞ' ವೇ ಎನ್ನಬೇಕು. ಈ ೞ ಗಳ ವಿಚಾರ ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಹೇಳಿದೆ– "ಪೃಕ್ಸ್ವರಾತ್ಪರೋೞೋಡಂ"[೧೬] ಋ,ಲೃಗಳ ಪರದಲ್ಲಿರುವ ೞ ಕಾರವು ಡಕಾರವಾಗುತ್ತದೆ. –ಮೃಡಾತೀದೃಶೇ, ಋಲೃಗಳು ಪೂರ್ವದಲ್ಲಿಲ್ಲದಿದ್ದರೆ 'ೞ' ಕಾರವು ಡಕಾರವಾಗುವುದಿಲ್ಲ. ಉದಾ. ನೞಂ ಪ್ಲವಮ್. ಇಲ್ಲಿ ೞ ಕಾರಕ್ಕೆ ಡಕಾರ ಬರುವುದೆಂದುದರಿಂದ ೞ ಕಾರವೇ ಮೂಲವೆಂದಾಯಿತು. ಮೂರ್ಧ ಸ್ಥಾನವಾದುದರಿಂದ ಡ ೞ ಕಾರಗಳಿಗೆ ಸಾಮ್ಯವಿದೆಯೆಂದು ವೈದಿಕಾಭರಣವ್ಯಾಖ್ಯೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಡಕಾರದಿಂದ ೞ ಹುಟ್ಟುತ್ತದೆಂದು ಕನ್ನಡ ವೈಯಾಕರಣರೂ ಹೇಳಿದ್ದನ್ನಿಲ್ಲಿ ಸ್ಮರಿಸಬಹುದು. ಋಗ್ವೇದ ಸಂಹಿತಾ ಭಾಗ ೧ರ ವ್ಯಾಖ್ಯಾನದಲ್ಲಿ ಡಕಾರಕ್ಕೆ ೞ ಕಾರ ಬರುವುದನ್ನು ಸ್ಪಷ್ಟಪಡಿಸಿದೆ–

ಅಜ್ಮಧ್ಯಸ್ಥ ಡ ಕಾರಸ್ಯ ೞ ಕಾರಂ ಬಹ್ವೃಚಾ ಜಗುಃ

ಅಜ್ಮಧ್ಯಸ್ಥ ಢಕಾರಸ್ಯ ೞ್ಹ ಕಾರಂ ವೈ ಯಥಾಕ್ರಮಮ್ (ಪುಟ ೬೧೨)

ಉದಾ - ಅಷಾ ೞ್ಹಂ ಯುತ್ಸು ಪೃತನಾಸು ಪಪ್ರಿಂ. (ಋ.ಸಂ. ೧-೧೯-೨೧)

ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋನೂತನೈರುತ

ಸ ದೇವಾಗಂ ಏಹ ವಕ್ಷತಿ ॥ ೨॥

ಸ್ವರಾಕ್ಷರಗಳ ಮಧ್ಯದಲ್ಲಿ ಡ ಕಾರ ಬಂದರೆ ೞ ಕಾರ, ಢ ಕಾರ ಬಂದರೆ ೞ್ಹ ಕಾರವಾಗುತ್ತವೆ. ಡ-ೞ ಕ್ಕೆ ಉದಾ ಈ ೞೇ (ಈಡೇ) ಢ-ೞ್ಹ ಕ್ಕೆ ಉದಾ - ಅಷಾ ೞ್ಹಂ (ಅಷಾಢಂ) ಡ ಕಾರದ ಮುಂದೆ ವ್ಯಂಜನ ಬಂದರೆ ೞ ಕಾರ ಬರುವುದಿಲ್ಲ. ಉದಾ- ಈಡ್ಯೋ (ಈಡ್) ಋಗ್ವೇದದಲ್ಲಿ ಡ ಕ್ಕೆ ೞ ಎಂದಿದ್ದರೆ ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ೞ ಕ್ಕೆ ಡ ಎಂದಿದೆ. ವ್ಯತ್ಯಯವೆಂಬುದು ಸಮಾನ. ಬಹುಶಃ ಋಗ್ವೇದದಲ್ಲಿ ಹೇಳಿದಂತೆ ಡ ಕಾರಕ್ಕೆ ೞ ಕಾರಬರುವುದೇ ಕನ್ನಡದಲ್ಲೂ ಕಂಡುಬರುತ್ತದೆ ವಿನಾ ೞ ಕಾರಕ್ಕೆ ಡ ಕಾರ ಬರುವುದು ಕಾಣುವುದಿಲ್ಲ. ೞ ಕಾರವು ವೈದಿಕ ಸಂಸ್ಕೃತದಲ್ಲಿದೆಯೆಂದೂ ಅದೂ ಮೂರ್ಧಾಸ್ಥಾನೀಯವೆಂದೂ ತಿಳಿಯುತ್ತದೆ. ಈಗ ಕನ್ನಡದಲ್ಲಿ ಹಾಗೂ ದ್ರಾವಿಡ ಭಾಷೆಗಳಲ್ಲಿ ಇದರ ವಿಚಾರವನ್ನು ಚರ್ಚಿಸಬಹುದು

ೞ ೞ, ಕುಳ, ಕ್ಷಳ -ವೈಯಾಕರಣರೆಲ್ಲಾ ಆಯಾ ಳಕಾರಗಳಿಗೆ ಅವುಗಳ ಹೆಸರಿನಲ್ಲಿ ಹಾಗೆ ಪ್ರಯೋಗಿಸಿದ್ದರೂ ಆ ಹೆಸರೇಕೆಂದು ಸ್ಪಷ್ಟಪಡಿಸಿಲ್ಲ. ಶ್ರೀ ಸೇಡಿಯಾಪು ಕೃಷ್ಣ ಭಟ್ಟರು ಈ ಹೆಸರುಗಳಿಗೆ ಔಚಿತ್ಯ ಕಲ್ಪಿಸಿ ಉಪಕರಿಸಿದ್ದಾರೆ. "ಸುಮಾರು ೞ ಎಂಬುದರಂತೆ ಬರೆಯಲ್ಪಡುವ ವರ್ಣ" ಎಂದು ಸೂಚಿಸುವುದಕ್ಕಾಗಿ ೞ ೞ ಎಂಬ ಹೆಸರು ಅದಕ್ಕೆ ಬಂದಿರಬೇಕು" ಎಂದೂ "ಸುಮಾರು ಸಾವಿರ ವರ್ಷಗಳ ಕೆಳಗೆ ನಮ್ಮ ಕ,ಳ ಲಿಪಿಗಳು ಅನುಕ್ರಮವಾಗಿ ಹಾಗಿದ್ದುವು, ಹೆಚ್ಚುಕಡಿಮೆ ಕು ಎಂಬುದರಂತೆ ಬರೆಯಲ್ಪಡುವ ವರ್ಣ ಎಂದು ಸೂಚಿಸಬಲ್ಲ ಕುಳ ಎಂಬ ಸಂಜ್ಞೆ ಅನ್ವರ್ಥವೇ ಆಗಿದೆ" ಎಂದೂ ಕ್ಷಳವೆಂದರೆ ವರ್ಣಮಾಲೆಯಲ್ಲಿ ಕ್ಷ ಎಂಬುದರ" ಸಮೀಪದಲ್ಲಿರುವ ಳ ಎಂಬರ್ಥವನ್ನು ಕೊಡುವ ಸಂಜ್ಞೆ ಎಂಬುದು ಸ್ಫುಟವಾದಂತಾಯಿತು." ಎಂದೂ ತಿಳಿಸಿದ್ದಾರೆ.[೧೯] ಕೇಶಿರಾಜನು ೞ, ೞೞ, ಕುಳ, ಎ, ಒ ಈ ಐದು ದೇಶೀಯಾಕ್ಷರಗಳೆಂದಿದ್ದಾನೆ. ಕುಳವೆಂದರೆ ಅಚ್ಚಗನ್ನಡ ಶಬ್ದಲ್ಲಿ ಬರುವ ಳಕಾರ- ಎಸಳು, ಕೇಳು, ಸಂಸ್ಕೃತ ಶಬ್ದದ ಲಕಾರದ ಸ್ಥಾನದಲ್ಲಿ ಬರುವುದು. ಕ್ಷಳ- ಜಳ, ತಳ, ಬಳ, ಇತ್ಯಾದಿ. ಕುಳ, ಕ್ಷಳಗಳಿಗೆ ಉಚ್ಚಾರದಲ್ಲಾಗಲೀ ಲಿಪಿ ರೂಪದಲ್ಲಾಗಲೀ, ಯಾವ ವ್ಯತ್ಯಾಸವೂ ಇಲ್ಲ. ಕೇವಲ ಸ್ಥಾನ ವ್ಯತ್ಯಾಸದಿಂದ ಮಾತ್ರ ಪ್ರತ್ಯೇಕತೆ. ಆದ್ದರಿಂದ ಈ ಭೇದ ಅವಶ್ಯವಿಲ್ಲ. ಹಾಗಿದ್ದರೆ ಹಲವು ವರ್ಣಗಳಲ್ಲಿ ಇಂತಹ ಪ್ರತ್ಯೇಕತೆಯನ್ನು ಹೇಳಬಹುದು - ಕನ್ನಡ ಶಬ್ದದಲ್ಲಿ ಬರುವಲಕಾರ ಸಂಸ್ಕೃತದಲ್ಲಿ ಬರುವ ಲಕಾರ ಇತ್ಯಾದಿ ೞ ೞ, ವು 'ಳ' ಕಾರಕ್ಕಿಂತ ತೀರ ಭಿನ್ನವಾದುದು. ಅದು ಮೂಲ ದ್ರಾವಿಡದಲ್ಲೇ

ಇರುವ ಸ್ವತಂತ್ರ ಧ್ವನಿಮಾ. ಇಂದಿಗೂ ತಮಿಳು ಮಲಯಾಳಗಳಲ್ಲಿ ಉಳಿದುಕೊಂಡಿದೆ. ಕನ್ನಡದಲ್ಲಿ 'ಳ ದೊಂದಿಗೂ ತೆಲುಗಿನಲ್ಲಿ 'ಡ' ದೊಂದಿಗೂ ಇದು ಅಂತರ್ಧಾನವಾಗಿದೆ. ಮಲಯಾಳ ವ್ಯಾಕರಣವಾದ ಲೀಲಾ ತಿಲಕ ದಲ್ಲಿ ಱ,ೞ ಗಳನ್ನು ದೇಶೀಯಾಕ್ಷರಗಳೆಂದು ಹೇಳಿದೆ. ೞ ವು ಸಂಸ್ಕೃತ 'ಷ'ದ ತದ್ಭವವೇ ಎಂದೊಮ್ಮೆ ಶಂಕಿಸಿ ಅಲ್ಲವೆಂದಿದ್ದಾನೆ.[೨೦] ಮೂರೂ ಳಕಾರಗಳ ಭೇದವಳಿದು ಒಂದೇ ಳ ಕಾರವಾಗಿ ಹರಿಹರನ ಕಾಲದಲ್ಲೇ ಅಂದರೆ ೧೨ನೇ ಶತಮಾನಕ್ಕಿಂತ ಹಿಂದಿಯೇ ರೂಪುಗೊಂಡಿರುವುದರಿಂದ ಅವನು ತನ್ನ "ಗಿರಿಜಾ ಕಲ್ಯಾಣ" ಕಾವ್ಯದಲ್ಲಿ "ವಿಚಾರಿಸಬೇಡದರಿಂ ಱ,ಳ ಕುಳ ಕ್ಷಳಂಗಳನಿದರೊಳ್" ಎಂದು ಘೋಷಿಸಿದ್ದಾನೆ. ಭಟ್ಟಾಕಳಂಕನ ಕರ್ಣಾಟಕ ಶಬ್ದಾನುಶಾಸನದಲ್ಲಿ ಳಕಾರ ಭೇದಗಳನ್ನು ಸ್ವೀಕರಿಸದಿದ್ದರೂ ಸೂತ್ರವೃತ್ತಿಗಳಲ್ಲಿ ಹೇಳದಿದ್ದರೂ ನಾನು ಹೇಳುತ್ತೇನೆಂದು ಡೋಬಹುಲಂ (ಸೂ.೧೪೦, ಪುಟ ೧೬೨) ಎಂಬ ಸೂತ್ರದ ಕೆಳಗೆ ವ್ಯಾಖ್ಯಾನದಲ್ಲಿ ಕೇಶಿರಾಜನು ಹೇಳಿದುದನ್ನೇ ಹೇಳಿ ೞ ಕಾರವಿರುವ ಒಂದು 'ಗಣ'ವನ್ನು ಕೊಡಲಾಗಿದೆ. ಅವನ ಕಾಲಕ್ಕಾಗಲೇ ಅದರ ಭೇದಗಳು ಕಣ್ಮರೆಯಾದುದರಿಂದ ಸೂತ್ರ ವೃತ್ತಿಗಳಲ್ಲಿ ಆ ವಿಚಾರ ಬಿಟ್ಟೇ ಬಿಟ್ಟಿರಬೇಕು. ಈಗ ಕನ್ನಡದಲ್ಲಿ ೞ ಕಾರವು ಸಂಪೂರ್ಣ ಳ ಕಾರವಾಗಿರುವುದರಿಂದ ಅದರ ಉಚ್ಚಾರಾದಿಗಳನ್ನು ತಿಳಿಯಲು ಉಳಿದ ದ್ರಾವಿಡ ಭಾಷೆಗಳಾದ ತಮಿಳು ಮಲಯಾಳಗಳ ಮರೆ ಹೋಗಬೇಕಾಗಿದೆ. ಲರಡಗಳಿಂದ ಳ ಱ ೞ ಗಳಾಗುತ್ತವೆಂದು ಭಾಷಾ ಭೂಷಣ, ಶಬ್ದ ಸ್ಮೃತಿಗಳಲ್ಲಿ ಹೇಳಿರುವುದನ್ನೇ ಕೇಶೀರಾಜ ಡ ಕಾರಾಶ್ರಿತಮಾದ ಱ,ಳ ನುಂ' ಎಂದು ಡ ಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱ,ೞ ವೆಸರ ೞ ಕಾರಂಪುಟ್ಟುಗುಂ, ಲಕಾರಂಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಕುಳ ವೆಸರ ಳ ಕಾರಂ ಪುಟ್ಟುಗುಂ, ಡ ಕಾರಂ ಮೂರ್ಧನ್ಯಂ ಱ,ೞನದರೊಳೇಕಸ್ಥಾನಿ, ಲಕಾರಂ ದಂತ್ಯಂ, ಕುಳನದರೊಳೇಕಸ್ಥಾನಿ" ಎಂದು ಸ್ಪಷ್ಟಪಡಿಸಿದ್ದಾನೆ. ಅವನ ಕಾಲ, ಅದಕ್ಕೂ ಹಿಂದೆಯೇ ಱ,ೞ ವು ಕುಳದಲ್ಲಿ ಐಕ್ಯವಾಗಲಾರಂಭವಾದ್ದರಿಂದ ಎರಡೂ ಉಳಿಯಲು ಎರಡಲ್ಲಿ ಗೊಂದಲವಾಗಾಬಾರದೆಂದು" ಕುಳ ಸಹಿತ ಶಬ್ದಗಳು ಮತ್ತು ಱ,ೞ ಸಹಿತ ಶಬ್ದಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ದಡ್ಡಕ್ಕರದ ಱ,ೞಕ್ಕೆ ರೇಫೆವೆರಸಿದ ದಡ್ಡಕ್ಕರದ ಪ್ರಾಸವನ್ನು ಸ್ವೀಕರಿಸುವುದರಿಂದ ಅವರೆರಡರ ಉಚ್ಚಾರದಲ್ಲಿ ಸಾಮ್ಯ ತೋರಿರಬಹುದು. ಱ, ೞ ರೇಫಗಳಲ್ಲಿ ವ್ಯತ್ಯಯವಾರಂಭವಾಗಿ ಕೆಲವು ಶಬ್ದಗಳಲ್ಲಿ ಱ,ೞದ ಸ್ಥಾನದಲ್ಲಿ ರೇಫವೇ ನೆಲೆಗೊಂಡಾಗಿತ್ತು. ಇದೇ ರೀತಿ ವ್ಯತ್ಯಾಸ ಮುಂದುವರಿಯಬಾರದೆಂದು ರೇಫ ಸಹಿತ ಮತ್ತು ಱ,ೞ ಸಹಿತ ಶಬ್ದಗಳ ಪ್ರತ್ಯೇಕ ಪಟ್ಟಿಯನ್ನು ಕೊಟ್ಟಿದ್ದಾನೆ. ನಿಜವಾದ ಱ,ೞ ಸಹಿತವಾಗಿದ್ದ ಬಿೞ್ದು ಉೞ್ದು ಮೊದಲಾದವು ಬಿರ್ದು, ಉರ್ದು ರೇಫ ಸಹಿತ ಎಂದಿದ್ದಾನೆ. ಱ, ೞ ಕುಳದ ಪರಿವರ್ತನೆಯ ಕಾಲವದಾದ್ದರಿಂದ ಕೆಲವದರಲ್ಲಿ ಅವನಿಗೇ ಸಂದೇಹವಿರುವುದರಿಂದ 'ಱ,ೞ ಸಂದೇಹಂ' ಎನ್ನುತ್ತಾನೆ. 'ಲ' ಕಾರಾಂತಗಳು ಳ ಕಾರಾಂತಗಳಾಗಿ ಅವನ ಕಾಲದಲ್ಲೇ ಪರಿವರ್ತನೆಯಾಗುತ್ತಿದ್ದುದನ್ನು "ಲಾಂತಮಿವಂ ಗ್ರಾಮ್ಯರರಿಯದುಚ್ಚರಿಸುವರ್ ಕುಳಾಂತ ಭ್ರಮೆಯಿಂ" ಎಂದು

ಖಂಡಿಸಿದ್ದಾನೆ. ಱ ಮಾತ್ರ ಕುಳ ೞ ಕಾರವಾಗುತ್ತಿದ್ದುದಲ್ಲ 'ಲ' ಕಾರವೂ ಕುಳ ಳ ಕಾರವಾಗಿ ತಿರುಗುತ್ತಿತ್ತು. ಲ ಕಾರದ ಬದಲು ಕೆಲವೊಮ್ಮೆ ಱ ಕಾರವೂ ಬರುತ್ತಿತ್ತು. ಇವೆಲ್ಲವಕ್ಕೂ ಸಾಕಷ್ಟು ಶಾಸನಗಳ ಆಧಾರಗಳೂ ಇವೆ. (ನಿಲಿಸಿದೊಂ-ನಿಱಿಸಿದೊಂ).

೮.೯ನೇ ಶತಮಾನದವರೆಗೆ 'ೞ' ಬದಲಾಯಿಸದೇ ಇತ್ತು. ಆದರೆ ಕ್ರಿ.ಶ. ೯೩೦ ರಲ್ಲಿ 'ೞ;ವು ವ್ಯಂಜನಗಳ ಮುಂದೆ 'ರ' ಆಗಿದೆ -ನೆರ್ಗತ್ತೆ (ನೆಗೞ್ತೆ) ಬೇರ್ಪರನ್ (ಬೇೞ್ಪರನ್) ನೋರ್ಪೊಡೆ (ನೋೞ್ಪೊಡೆ), ೞ ದಸ್ಥಾನದಲ್ಲಿ ಮತ್ತು ಳ ಒಂದೇ ಶಾಸನದಲ್ಲಿ ಕಂಡು  ಬರುವುದರಿಂದ ೞ>ರ, ೞ>ಳ ಎರಡೂ ಸಾಮಾನ್ಯ ಒಂದೇ ಸಮಯದಲ್ಲಿ ಪರಿವರ್ತಿಸಲು ಆರಂಭಿಸಿದಂತೆ ತೋರುತ್ತದೆ. ಹನ್ನೊಂದನೇ ಶತಮಾನದಲ್ಲಿ ೞ>ರ, ೞ>ಳ ಹೆಚ್ಚುತ್ತಾ ಹೋಯಿತು. ಇರ್ೞ್ಬ (ಕ್ರಿ.ಶ. ೧೦೬೭) ಎಂಬ ಎರಡೂ ಸೇರಿದ ರೂಪ ಬದಲಾವಣೆಯ ಹಂತವನ್ನು ತೋರುವ ಆಶ್ಚರ್ಯಕರ ಪ್ರಯೋಗವಾಗಿದೆ. ಹದಿಮೂರನೇ ಶತಮಾನದಲ್ಲಿ 'ಳ' ಕಾರವೇ ಸ್ಥಿರವಾಗಿ 'ೞ' ಕಾರ ತೀರ ಕಡಿಮೆಯಾಯಿತು. ಹದಿನಾಲ್ಕನೇ ಶತಮಾನದನಂತರ 'ಳ' ವು ಸಂಪೂರ್ಣ ೞ ಕಾರವನ್ನಾಕ್ರಮಸಿತು"[೨೧] ಸಂಸ್ಕೃತದ ಲಕಾರ ೞ ಕಾರವಾಗಿ (ತಿೞಿಕ ೧೦೮೫), ೞ ಕಾರವು ರೇಫವಾಗಿ ತೋರುವುದೆಲ್ಲ ಪರಿವರ್ತನೆಯ ಗೊಂದಲ ಮತ್ತು ಅರಿಯದ ತಪ್ಪುಗಳನ್ನು ಸೂಚಿಸುತ್ತವೆ. ಬೞ್ದುಂಕು>ಬರ್ದುಂಕು, ಬರ್ದುಕು>ಬದುಕು. ಹೀಗೆ ೞ ಕಾರವು ರೇಫವಾಗಿ ಮತ್ತೆ ಮೊದಲಿನ ವ್ಯಂಜನದಲ್ಲೇ ಲೀನವಾಗಿ ಸಜಾತೀಯ ದ್ವಿತ್ವವಾಯಿತು. ಱ, ೞಗಳು ಉಚ್ಚಾರಣೆಯಲ್ಲಿ ಅಸ್ಪಷ್ಟತೆಯನ್ನು ಹೊಂದುತ್ತಾ ಕ್ರಮೇಣ ಕಣ್ಮರೆಯಾದುವು. ಈ ಉಚ್ಚಾರಣೆಯ ಅಸ್ಪಷ್ಟತೆಯ ಹಂತವನ್ನೇ ಶಿಥಿಲದ್ವಿತ್ವವೆನ್ನಬಹುದು. "ಱ,ೞ ಕುಳ ರೇಫಾಂತ'ಗಳು ಶಿಥಿಲತೆಯನ್ನು ಹೊಂದಿಯೇ ಅವುಗಳ ಲೋಪ ಅಥವಾ ಮಧ್ಯಸ್ವರಾಗಮವಾಗಲು ಕಾರಣವಾಯಿತು.

೧೩ನೇ ಶತಮಾನದವರೆಗೆ ೞ ಇತ್ತೆಂದೂ ಹತ್ತರಿಂದ ಹನ್ನೆರಡನೇ ಶತಮಾನದ ಅವಧಿಯಲ್ಲಿ ಳ ಅಥವಾ ರ ಆಗಿ ಪರಿವರ್ತಿಸತೊಡಗಿತೆಂದು ಏ- ಏಳೆ (ಕಿ.ಶ. ೧೧೧೯) ಅೞಿ-ಅಳಿ (೧೦೭೬ ಕ್ರಿ.ಶ.) ಅೞ್ದು -ಅರ್ದು, ಎೞ್ದು - ಎರ್ದು" ಎಂದು ಎಲ್.ವಿ. ರಾಮಸ್ವಾಮಿ ಅಯ್ಯರ್ ತಮಿಳ್ ೞ ಕಾರದ ಬಗ್ಗೆ ಹೇಳುತ್ತಾ ಕನ್ನಡದ ೞವನ್ನು ವಿವರಿಸಿದ್ದಾರೆ[೨೨].

**ೞ ಕಾರದ ಉಚ್ಚಾರ** "ಹಳಗನ್ನಡ ಶಾಸನಗಳಲ್ಲಿ ೞ ಕಾರವಿದ್ದಲ್ಲಿ ಮುಂದೆ ಱ ಕಾರವೂ ರೇಫವು ಬಳಕೆಯಲ್ಲಿ ಬಂದುದನ್ನು ನೋಡಿದರೆ ೞ ಕಾರದ ಉಚ್ಚಾರವು ರೇಫಡಕಾರಗಳಿಗೆ ಮಧ್ಯಸ್ಥವಾಗಿತ್ತೆಂದು ಹೇಳಬಹುದು. ಅಡೞ್ (ಹ.ಗ) ಅಡರು (ಹೊ.ಗ.) ಕಟವಪ್ರ ಶೈಲಮಡೞ್ದೇನಮ್ಮಾ ಕಳನ್ತೂರನಂ ಬಾಲೇ ಪೆರ್ಗೂರವನಂ ಸಮಾಧಿ ನೆರೆದೂನ್ (ಇ.ಸಿ. ೨೨.ಜಿ.ಒ.ಕೆ.ಐ ೨೧, ೭೦೦ ಕ್ರಿ.ಶ.) ಕನ್ನಡ ತಮಿಳು ಶಬ್ದಗಳಲ್ಲಿ ೞ ಕಾರವಿರುವ ಕಡೆ ತೆಲುಗಿನಲ್ಲಿ ರಕಾರವಾಗಲೀ ಸ ಕಾರವಾಗಲಿ ತುಳುವಿನಲ್ಲಿ ರಕಾರವಾಗಲೀ ಇರುತ್ತದೆ.

ಏೞ್ (ಕ) ಏೞ್ (ತ) ಏಡು (ತೆ) ಏೞ್ (ತು)

ಕೋೞಿ (ಕ) ಕೋೞಿ (ತ) ಕೋಡಿ (ತೆ) ಕೋರಿ (ತು)

ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾ ಗುಚ್ಚರಿಸೆ ೞ ೞಂ ಪುಟ್ಟುಗುಂ"ಎಂದು ಕೇಶೀರಾಜ ಹೇಳಿದಂತೆ ಮುಂದೆ ಕ,ಪ ಬಂದಾಗ 'ಡ' ವು ೞ ಆಗುತ್ತದೆ. ನೋಡು+ಪಂ- ನೋೞ್ಪಂ, ಮಾಡು+ಕೆ ಮಾೞ್ಕೆ, ಕಾಡು+ಕಿಚ್ಚು – ಕಾೞ್ಕೆ + ಚ್ಚು ಎರಡು ಸ್ವರಗಳ ಮಧ್ಯದಲ್ಲಿ ೞ ಬಂದಾಗ ಳ ಕಾರವಾಗುತ್ತದೆ. ಅೞಿಪಿ–ಅಳಿಪಿ. ಒಟ್ಟಿನಲ್ಲಿ ಡ, ೞ ಳ ಗಳ ಉಚ್ಚಾರದಲ್ಲಿ ಸ್ವಲ್ಪ ವ್ಯತ್ಯಾಸವಿದ್ದಿರಬಹುದಾದರೂ ಹೆಚ್ಚು ಕಡಿಮೆ ಒಂದೇ ಆಗಿರಬೇಕು.

ತಮಿಳುನಾಡಿನಲ್ಲೇ ೞ ಕಾರದ ಉಚ್ಚಾರ ಎಲ್ಲೆಡೆ ಒಂದೇ ರೀತಿಯಾಗಿಲ್ಲ. ಉತ್ತರ ಭಾಗದಲ್ಲಿ ೞ ಉಚ್ಚಾರವೇ ಸಾಮಾನ್ಯ ಇದ್ದರೂ ದಕ್ಷಿಣ ಭಾಗದಲ್ಲಿ ಳ ಕಾರವಾಗಿ ಉಚ್ಚರಿಸುತ್ತಾರೆ. ಕೆಲವೆಡೆ ರ್ಝ, ಜ್ಹ ಇಲ್ಲವೇ ಯ ಕಾರದಂತೆ ಉಚ್ಚಾರವಾಗುತ್ತದೆ. ಕೆಲವೆಡೆ ಅದನ್ನು ಬಿಟ್ಟು ಉಚ್ಚರಿಸುತ್ತಾರೆ. ೞ ಕಾರ ಮಲಯಾಳದಲ್ಲಿ ಯ ಕಾರವು ಆಗುತ್ತದೆ. ಉತ್ತರ ಕೇರಳದಲ್ಲಿ, ಕಾಸರಗೋಡಿನ ಮುಸ್ಲಿಂ ಮಲಯಾಳದಲ್ಲಿ ೞ ವನ್ನು ಯ ವೆಂದೇ ಉಚ್ಚರಿಸುತ್ತಾರೆ. – ಪೞಂ – ಪಯಂ, ವಾೞ– ಬಾಯ, ಮೞ–ಮಯ ಇತ್ಯಾದಿ ವ್ಯತ್ಯಾಸಗಳಾಗುತ್ತವೆ. ಮಲಯಾಳದಲ್ಲಿ ೞ ವನ್ನು ಬೇರೆ ರೀತಿ ಬರೆಯುತ್ತಾರೆ. ಸರಿಯಾದ ಮಲಯಾಳ ಮಾತಾಡುವವರು ೞ ವನ್ನು ಉಚ್ಚರಿಸುವುದು ಕೇಳಿದರೆ 'ಯ್ಡ' ಎಂಬಂತೆ ಕೇಳುತ್ತದೆ. ಅಂದರೆ ನಾಲಗೆಯನ್ನು ಅಗಲವಾಗಿಸಿ ತುದಿಯನ್ನು ಚೆನ್ನಾಗಿ ಬಾಗಿಸಿ ಮಧ್ಯಮೂರ್ಧವನ್ನು ಸ್ಪರ್ಶಿಸಬೇಕು. ಆಗ ಈ ಧ್ವನಿಹುಟ್ಟುತ್ತದೆ. ಅದೇ ರೀತಿಯಲ್ಲಿ ಆದರೆ ಅಷ್ಟು ಒತ್ತಡವಿಲ್ಲದೆ ನಾಲಗೆ, ಸ್ವಲ್ಪ ಹಿಂದಕ್ಕೆ ಸ್ಪರ್ಶಿಸಿದರೆ 'ಡ' ಕಾರ ಹುಟ್ಟುತ್ತದೆ. ಇನ್ನೂ ಸ್ವಲ್ಪ ಹಿಂದಕ್ಕೆ ಸರಿದರೆ ತಾಲು ಸ್ಥಾನಕ್ಕೆ ಬಂದು 'ಯ' ಉತ್ಪತ್ತಿಯಾಗುತ್ತದೆ. ಆದುದರಿಂದಲೇ ಡವನ್ನು ಒತ್ತಿ ಉಚ್ಚರಿಸಿದರೆ ೞ ಹುಟ್ಟುತ್ತದೆಂದು ಹೇಳಿರುವುದು. ಡ, ೞ ಗಳ ಮಧ್ಯದಲ್ಲಿ 'ಳ' ಹುಟ್ಟುತ್ತದೆ. ಆದ್ದರಿಂದ ಡ–ೞ–ಳ ಆಗುವುದು. ೞ ಕಾರವು 'ಯ' ಕಾರವಾಗುವುದು ಸೌಲಭ್ಯಾಕಾಂಕ್ಷೆಯ ತಪ್ಪು ಉಚ್ಚಾರದಿಂದ. ೞ ಕಾರದ ಉಚ್ಚಾರದ ಬಗೆಗೆ ಶ್ರೀ ಕುಶಾಲಪ್ಪಗೌಡರು ತಮ್ಮ ಲೇಖನದಲ್ಲಿ ಉದ್ಧರಿಸಿರುವ ಆಧುನಿಕ ಭಾಷಾ ವಿಜ್ಞಾನಿ ಪ್ರೋ ಜೆ.ಬಿ. ಫಿರ್ತ್ (J.B. Firth) ಅವರ ಅಭಿಪ್ರಾಯ ನಮ್ಮ ಅಭಿಪ್ರಾಯಕ್ಕೆ ಸಮರ್ಥನೆ ನೀಡುತ್ತದೆ[೨] "ನಾಲಿಗೆ ಹಿಂದಕ್ಕೆಳೆದು ಅಗಲವಾಗಿ ದಪ್ಪವಾಗಿಸಿ ಬಾಯಟ್ಟದ (Hard Palate) ಹಿಂಭಾಗವನ್ನು ಸ್ಪರ್ಶಿಸಿದಾಗ ೞ ಹುಟ್ಟುತ್ತದೆ.

ದಂತ್ಯವಾದ 'ಲ'ಕಾರದ ವರ್ತ್ಸ್ಯ ಸ್ಥಾನೀಯವಾದ ರ ಕಾರದ ಸ್ಥಾನವನ್ನಾಕ್ರಮಿಸುತ್ತದೆ. ಒಂದು ಧ್ವನಿಯ ಬದಲು ಇನ್ನೊಂದರ ಉಚ್ಚಾರವಾಗುವುದು ಕೆಲವೊಮ್ಮೆ ಅಜ್ಞಾನದಿಂದ, ಕೆಲವೊಮ್ಮೆ, ಅಜಾಗರೂಕತೆಯಿಂದ ರ.ಲಗಳ ಸ್ಥಾನ ಪಲ್ಲಟವಾಗುತ್ತದೆ ಮರಲ್. ಅರಲ್ ಎರಲ್ ಎಂಬ ಶಬ್ದಗಳಲ್ಲಿ ರ,ಲ ಕಾರಗಳ ಸ್ಥಾನಪಲ್ಲಟವಾಗಿ. ಮಲರ್ ಅಲರ್ ಎಲರ್ ಆಗುತ್ತದೆಂದು ಕೇಶೀರಾಜ ಹೇಳಿದ್ದಾನೆ. (ಶ.ದ.ಸೂ ೩೬. ಪು ೩೭) ಲ ಕಾರಾಂತಗಳನ್ನು ಕುಳಾಂತ ಭ್ರಮೆಯಿಂದ ಅರಿಯದ ಗ್ರಾಮ್ಯರು ಉಚ್ಚರಿಸುತ್ತಾರೆ. (ಸೂ ೩೮) ಎಂದಿದ್ದಾನೆ. ಅಂದರೆ ಬೆರಲ್ ಒರಲ್ ಮೊದಲಾದುವನ್ನು ಬೆರಳ್.

ಒರಳ್ ಎಂದುಚ್ಚರಿಸುತ್ತಿದ್ದರು. ಲ ಕಾರವನ್ನು ಳ ಕಾರವಾಗಿ ಉಚ್ಚರಿಸುವ ಕ್ರಮವಿತ್ತು. ಆ ಪರಿವರ್ತನೆ ಆಗಲೇ ಇದ್ದು ಈಗ ಅದೇ ನೆಲೆಗೊಂಡು ಳ ಕಾರವೇಸ್ಥಿರವಾಗಿ ಉಕಾರಾಂತವೂ ಆಗಿ ಬೆರಳು, ಒರಳು ಆಗಿವೆ. ಲ-ಳ ಪ್ರವೃತ್ತಿ ಹೆಚ್ಚಾಗಿ ಸಂಸ್ಕೃತ ಶಬ್ದದ ಲಕಾರವನ್ನೂ ಳ ಕಾರವನ್ನಾಗಿ ಉಚ್ಚರಿಸುತ್ತಾರೆ. ಇದಕ್ಕೆ 'ಕ್ಷಳ' ಎಂಬ ಹೆಸರನ್ನು ಕೊಟ್ಟು ವೈಯಾಕರಣರು ಮಾನ್ಯತೆಯನ್ನು ನೀಡಿದರು. 'ಳ' ದ್ರಾವಿಡವರ್ಗದಲ್ಲಿ ಬಹಳ ಪ್ರಿಯಾವಾದ ಧ್ವನಿಯೆನ್ನಿಸುತ್ತದೆ. ಮಲಯಾಳಿಗಳು ಕೆಲವೊಮ್ಮೆ ಇತರ ದ್ರಾವಿಡ ಭಾಷಾ ಭಾಷಿಗಳೂ, ಪದಮಧ್ಯದ ಇಂಗ್ಲೀಷಿನ 'ಲ' ಕಾರವನ್ನೂ ಳ ಕಾರವಾಗಿಸುತ್ತಾರೆ.- ಕಾಲೇಜು - ಕಾಳೇಜ್, ನೊಲೇಜ್ -ನೋಳೆಜ್, ಕ್ಲಾಸ್-ಕ್ಳಾಸ್, ಇತಾದಿ. ಲ-ಳ ಪ್ರವೃತ್ತಿ ತೀರಾ ಸಾಮಾನ್ಯವೆನಿಸುತ್ತದೆ. ಆದ್ದರಿಂದ "ರಲಯೋರಭೇದ" ಲಳಯೋರಭೇದ: ಎನ್ನಬೇಕು. ಳ ದ ಮೇಲಿನ ಪ್ರೀತಿಯಿಂದ, ೞ ದ ಉಚ್ಚಾರವು ಅದಕ್ಕಿಂತ ಕಷ್ಟವಾದ್ದರಿಂದ ೞ ಕಾರವೂ ಳ ಕಾರವಾಯಿತು. ರ-ಲ, ಲ-ಳ, ೞ-ಳ ಈ ರೀತಿಯ ವ್ಯತ್ಯಯವಾಗುತ್ತದೆ. ಈಗ 'ೞ ಳ ಯೋರಭೇದ' ಎಂಬ ಮಾತು ಕನ್ನಡದಲ್ಲಿ ಸ್ಥಿರವಾಗಿದೆ. ಇಷ್ಟು ಮಾತ್ರವಲ್ಲದೆ ೞ-ಣ, ಳ-ಣ ವೂ ಬಹಳವಾಗಿ ತೋರುತ್ತದೆ. ೞ,ಳ ಗಳು ಣ ವಾಗಿ ಕೆಲವೊಮ್ಮೆ ಣ ದ ಸ್ಥಾನದಲ್ಲಿ ಳ ಬರುವುದೂ ತೋರುತ್ತದೆ. ಗಿಳಿ-ಗಿಣಿ, ಗೆಳೆಯ-ಗೆಣೆಯ, ಗೆಣಸು-ಗೆಳಸು, ಮೆೞಸು-ಮೆಣಸು, ಗೞತೆ-ಗಣೆ, ಇತ್ಯಾದಿ, ಎಷ್ಟೋ ಶಬ್ದಗಳನ್ನು ಪಟ್ಟಿ ಮಾಡಬಹುದು. ಡ,ಣ,ೞಳಗಳ ಉಚ್ಚಾರಣ ಸ್ಥಾನದಲ್ಲಿ ಹೆಚ್ಚು ಅಂತರವಿಲ್ಲದೆ ಬಹಳ ಸಾಮೀಪ್ಯವಿರುವುದೇ ಇದಕ್ಕೆ ಕಾರಣ. ಮೂರ್ಧಾ ಸ್ಥಾನದ ಸ್ವಲ್ಪ ಹಿಂದು ಮುಂದಾಗಿ ಇವು ಉಚ್ಚರಿಸಲ್ಪಡುತ್ತವೆ. ಕನ್ನಡದಲ್ಲಿ 'ಳ' ಇರುವಲ್ಲಿ ತುಳುವಿನಲ್ಲಿ 'ಣ' ಕಂಡು ಬರುತ್ತದೆ ಎಳ್ (ಕ) ಎಣ್ಮೆ (ತು) ಗುಳಿ (ಕುಣಿ) ಕ. ಗುಣ್ಡೆ (ತು) ಪೇಳ್ (ಕ) ಪಣ್ (ತು) ಕೇಳ್ (ಕ) ಕೇಣ್ (ತು) ಇತ್ಯಾದಿ. ಇದನ್ನು ವಿಮರ್ಶಿಸುತ್ತಾ ಶ್ರೀ ಬಿ. ರಾಮಚಂದ್ರರಾವ್ ಅವರು "ಕನ್ನಡದಲ್ಲಿರುವಷ್ಟು ಳ, ಣ ವ್ಯತ್ಯಯದ ಬಾಹುಳ್ಯ ಮತ್ತು ಸ್ವಚ್ಛಂದತೆಯನ್ನು ಇತರ ದ್ರಾವಿಡ ಭಾಷೆಯಲ್ಲಿ ಕಾಣಲಾರೆವೆಂದೂ ದ್ರಾವಿಡ ಭಾಷಾ ವರ್ಗದ ಸಹೋದರೀ ಭಾಷೆಗಳ ಜ್ಞಾತಿ ಪದಗಳಲ್ಲಿ ಳಣ ವ್ಯತ್ಯಯ ಕಂಡು ಬರುವುದರಿಂದ ಈ ವ್ಯತ್ಯಯ ಮೂಲ ದ್ರಾವಿಡ ಸ್ಥಿತಿಯಲ್ಲೇ ಪ್ರಾರಂಭಿಸಿರಬೇಕೆಂದೂ ತಿಳಿಸಿದ್ದಾರೆ.[೨೫] ಹಲವು ಧ್ವನಿಗಳೊಂದಿಗೆ ೞ/ಳ ಗಳ ವ್ಯತ್ಯಯವಾಗುವುದರಿಂದ ಅದೊಂದು ಬಹಳ ಮುಖ್ಯವಾದ ಮತ್ತು ಸಮಸ್ಯಾತ್ಮಕವಾದ ಧ್ವನಿಯೆನಿಸುತ್ತದೆ.

೧. ೞ ವು ಮೂಲದ್ರಾವಿಡ ಧ್ವನಿಯಾಗಿದ್ದು ಒಂಬತ್ತನೇ ಶತಮಾನದವರೆಗೆ ಕನ್ನಡದಲ್ಲಿ ಉಳಿದುಕೊಂಡು ಬಂತು.

೨. ಹತ್ತನೇ ಶತಮಾನದಿಂದ ೞ-ರ, ೞ-ಳ, ವ್ಯಾತ್ಯಾಸ ಆರಂಭವಾಗಿ ಮುಂದೆ ೞ >ಳ ಕಾರವೇ ಹೆಚ್ಚುತ್ತಾ ಹೋಗಿ ಹದಿಮೂರನೇ ಶತಮಾನದಲ್ಲಿ ೞ ಕಾರದ ಸ್ಥಾನದಲ್ಲಿ ಳ ಕಾರವೇದೃಢವಾಯಿತು. ಹದಿನಾಲ್ಕನೇ ಶತಮಾನದಿಂದ ೞ ಕಾರ ಶಾಶ್ವತವಾಗಿ ನಿರ್ಗಮಿಸಿತು.

೩. ೞ ಳ ಎರಡೂ ಕನ್ನಡದ ಸ್ವತಂತ್ರ ಧ್ವನಿಮಾಗಳು.

೪. ರ–ಲ, ಲ–ಳ, ೞ –ಳ, ೞ /ಳ–ಣ ಇಂತಹ ವ್ಯತ್ಯಾಸಗಳಾಗುತ್ತವೆ.

೫. ಬರವಣಿಗೆಯಲ್ಲಿ ೞ ಳ ವ್ಯಾತ್ಯಾಸ ಹತ್ತನೇ ಶತಮಾನದಿಂದ ಕಂಡುಬಂದರೂ ಆಡುಮಾತಿನಲ್ಲಿ ಅದಕ್ಕಿಂತ ಮೊದಲೇ ಆರಂಭವಾಗಿರಬೇಕು.

**ಅಡಿಟಿಪ್ಪಣಿಗಳು**

೧. ಏಫಸ್ತು ರಸ್ತ ೧–೧೯ – ತೈತ್ತಿರೀಯ ಪ್ರಾತಿಶಾಖ್ಯ (ತೈ.ಪ್ರಾ)

೨. ತೈತ್ತಿರೀಯ ಪ್ರಾತಿಶಾಖ್ಯ –ವೈದಿಕಾಭರಣ ವ್ಯಾಖ್ಯಾ

೩. ಕ್ರಿಟಿಕಲ್ ಸ್ಟಡೀಸ್ ಇನ್ ಫೊನೆಟಿಕ್ ಒಬ್ಸರ್ವೇಶನ್ ಆಫ್ ಇಂಡಿಯನ್ ಗ್ರಾಮರಿಯನ್ಸ್ ಪೇಜ್ ೬–೭ (S.S.P.I.G. 6-7)

೪. ಕನ್ನಡ ಭಾಷೆಯ ಚರಿತ್ರೆ (ಕ.ಭಾ)

೫. 'ರೇಫೇ – ಶಕಟರೇಫ – ರ–ೞ' ಹಂಪನಾಗರಾಜಯ್ಯ – ಕನ್ನಡನುಡಿ (ಕ.ನು) ಸಂಪುಟ ೨೮, ಸಂಚಿಕೆ ೧೦, ಅಕ್ಟೋಬರ್ ೧೯೬೫.

೬. ರೇಫೇ ಜಿಹ್ವಾಗ್ರಮಧ್ಯೇನ ಪ್ರತ್ಯಗ್ದಂತ ಮೂಲೇಭ್ಯ ೧–೪೧ ತೈತ್ತಿರೀಯ ಪ್ರಾತಿಶಾಖ್ಯ (ತೈಪ್ರಾ. ೧–೪೧)

೭. "ರೇಫೇ ವರ್ತ್ಸ್ಯಮೇಕೇ".... ಋಗ್ವೇದ ಪ್ರಾತಿಶಾಖ್ಯ ಭಾಗ ೧ (ಋ.ಪ್ರಾ)

೮. ಸಮ್ ಪ್ರೊಬ್ಲೆಮ್ಸ್ ಇನ್ ಕನ್ನಡ ಲಿಂಗ್ವಿಸ್ಟಿಕ್ಸ್, ಪೇಜ್ ೧೬ (ಎಸ್.ಪಿ.ಎಲ್.)

೯. ಶಬ್ದಮಣಿದರ್ಪಣ, ಸೂ. ೨೮ ವೃತ್ತಿ, ಡಿ.ಎಲ್. ಎನ್. ಪ್ರತಿ, ಪುಟ ೨೨

೧೦. A Grammar of oldest Kanarese Inscription, Dr.A.N. Narasimhia Page 23.

೧೧. Historical Grammaar of old Kannada -Dr. G.S. Gai.

೧೨. ಕನ್ನಡ ಭಾಷೆಯ ಚರಿತ್ರೆ – ಕಭಾ. ಪ್ರಗೋ. ಕುಲಕರಣಿ

೧೩. A Grammar of oldest Kanarese Inscription, Page 39.

೧೪. Historical Grammaar of old Kannada -G.S. Gai.

೧೫. ದರ್ಪಣಾವಲೋಕ–ಕೆ. ಕುಶಾಲಪ್ಪಗೌಡ, ಪ್ರಬುದ್ಧ ಕರ್ಣಾಟಕ, ಸಂಪುಟ ೪೩, ಸಂಚಿಕೆ. ೩ ಪುಟ ೨೯, ೧೯೬೧–೬೨.

೧೬. Indian Palaeography, G. Buller, 1962

೧೭. ಋಗ್ವೇದ ಸಂಹಿತಾಭಾಗ –೧, ಮಂಡಲ೧, ಅನುವಾಕ೧, ಸೂಕ್ತ೧, ಅಷ್ಟಕ೧, ಅಧ್ಯಾಯ ೧, ವರ್ಗ೧–೨.

೧೮. ತೈತ್ತಿರೀಯ ಪ್ರಾತಿಶಾಖ್ಯ ೧೩–೧೬, ಪುಟ ೩೬೫

೧೯. ಕನ್ನಡ ವರ್ಣಗಳು: ಸೇಡಿಯಾಪು ಕೃಷ್ಣಭಟ್ಟ, ಪುಟ, ೯೯.೧೦೩.೧೦೪

೨೦. ಲೀಲಾತಿಲಕಂ – ಕನ್ನಡ ಅನುವಾದ (ಬಿ.ಕೆ. ತಿಮ್ಮಪ್ಪ ಪ್ರೋ.ಪಿ. ಸುಬ್ರಾಯ ಭಟ್ಟ) ಪುಟ ೬೬–೬೯.

೨೧. A Grammar of oldest Kanarese Inscription (A.N. Narasimhia) Page 62.

೨೨. Tamil l-(L.V. Ramaswamy Aiyar) - The Journal of the oriental Re search, Madras. Vol IX 1935 Page 195.

೨೩. ಕನ್ನಡ ಭಾಷೆಯ ಚರಿತ್ರೆ : ಪ್ರ. ಗೋಕುಲಕರಣಿ

೨೪. The Phoneme - L. (K.Kushalappa Gowda - Kannada Studies. 5. University of Mysore) Page 51

೨೫. ಕನ್ನಡದಲ್ಲಿ ಳ/ಣಗಳ ವ್ಯತ್ಯಯ ೩– (ಬಿ ರಾಮಚಂದ್ರರಾವ್ ಪ್ರಬುದ್ಧ ಕರ್ಣಾಟಕ, ಸಂಪುಟ ೪೨, ಸಂಚಿಕೆ ೩. ೧೯೬೦) ಪ್ರ.ಕ.ಸಂ. ೪೨, ಸಂ೩. ೧೭೬೦.

ಕರ್ನಾಟಕ ಲೋಚನ
ಸಂಪುಟ ೨೮, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೪

# ೧೨. ಕನ್ನಡದಲ್ಲಿ ಕೂಡು ಪದಗಳು

-ಡಾ.ಎಂ. ಜಿ. ವಾರಿ*

"ಜನಪದ ಮೌಖಿಕ ಭಾಷೆಯನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡಿದರೆ ಕನ್ನಡ ಭಾಷೆಯ ಚರಿತ್ರೆಯನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ."[೧]

ಇಲ್ಲಿ ಮೌಖಿಕ ಭಾಷೆ ಎಂದರೆ ನಮ್ಮ ನಿತ್ಯ ಬಳಕೆಯಲ್ಲಿರುವ ಆಡುಭಾಷೆಯೆ ಆಗಿದೆ. ಆಡುನುಡಿ ಅಥವಾ ಆಡುಭಾಷೆ ಎಂದಾಗ ಕನ್ನಡ ತನ್ನ ಗರ್ಭದಾಳದಲ್ಲಿ ನೂರಾರು ಒಳನುಡಿಗಳನ್ನು ಒಳಗೊಂಡಿರುವಂಥದ್ದು. ಅವುಗಳೆಲ್ಲದರ ಅಧ್ಯಯನ ಸದ್ಯಕ್ಕಂತು ಸಾಧ್ಯವಾಗದ ಮಾತು. ಗಮನಕ್ಕೆ ಬಂದಿರುವ ಒಳಗುಡಿಗಳ ಸೂಕ್ಷ್ಮ ಅವಲೋಕನ ಮಾಡಿದರೆ ಸಾಕು ಭಾಷಾ ಬೆಳಕಿಂಡಿಗಳಂತಿರುವ ಕೆಲವು ಕನ್ನಡದ ಪದ ಪ್ರಕಾರಗಳ ಮತ್ತದರ ವೈಲಕ್ಷಣ್ಯಗಳನ್ನು ಕಂಡುಕೊಳ್ಳಲಂತು ಸಾಧ್ಯವಿದೆ.[೨] ಅಂಥ ವಿಶಿಷ್ಟ ಪದ ಪ್ರಕಾರಗಳಲ್ಲಿ ಕೂಡುಪದಗಳು ಒಂದು. ಈ ತೆರನಾದ ಕೂಡುಪದ ಎಂದರೇನು? ಅವುಗಳ ರಚನಾವೈಶಿಷ್ಟ್ಯವೇನು? ಎಂಬಂತಹ ಕೂತೂಹಲಕರ ಪ್ರಶ್ನೆ ಸಹಜ. ಇದಕ್ಕೆ ಉತ್ತರವಾಗಿ ಈ ರೀತಿ ವಿಶ್ಲೇಷಣಾತ್ಮಕ ವಿವರಣೆ ನೀಡಬೇಕಾಗುತ್ತದೆ.

"ಆಗು, ಆಡು, ಕೊಡು, ಬಿಡು. ಕಚ್ಚು ಬೀಳು, ಮಾಡು. ಹಾಕು ಮೊದಲಾದ ಕೆಲವು ವಿಶಿಷ್ಟ ಕ್ರಿಯಾಪದಗಳೊಂದಿಗೆ ಇತರ ಕ್ರಿಯಾಪದಗಳನ್ನು ಸೇರಿಸಿ ಕೂಡುಪದಗಳನ್ನು ತಯಾರಿಸುವ ವಿಧಾನವೊಂದು ಕನ್ನಡದಲ್ಲಿ ಬಳಕೆ ಇದೆ. ಈ ಕ್ರಿಯಾಪದಗಳೊಂದಿಗೆ ಬೇರೆ ಕ್ರಿಯಾಪದಗಳನ್ನು ಮಾತ್ರವಲ್ಲದೆ, ನಾಮಪದ ಇಲ್ಲದೆ ಗುಣಪದಗಳನ್ನು ಸೇರಿಸಿಯೂ ಇಂತಹ ಕೂಡುಪದಗಳನ್ನು ತಯಾರಿಸಲು ಸಾಧ್ಯವಿದೆ.[೩]

ಈ ರೀತಿ ಕೂಡುಪದಗಳಲ್ಲಿ ಎರಡೆರಡು ಪದಗಳು ಕೂಡುವುದು ಸಹಜ. ಇವೆರಡರಲ್ಲಿ ಮೊದಲನೆ ಪದ ಕ್ರಿಯಾಪದ ಅಥವಾ ನಾಮಪದವಾಗಿರಬಹುದು.

* ಚಾಲುಕ್ಯ ನಗರ, ೫ನೇ ತಿರುವು, ಬಾದಾಮಿ - ೫೮೭೨೦೧. ಮೊ: ೯೮೪೪೬೭೨೪೩೯.

ಆದರೆ ಎರಡನೇ ಪದ ಮಾತ್ರ ಕಡ್ಡಾಯವಾಗಿ ಕ್ರಿಯಾಪದವೇ ಆಗಿರಬೇಕು. ಅಂದರೆ ಒಟ್ಟಾರೆ ಕ್ರಿಯಾಪದದ ಅರ್ಥವೇ ಹೊರಡುವಂತಿರಬೇಕು. ಇಲ್ಲಿ ಮೊದಲನೆಯ ಕ್ರಿಯಾಧಾತು ಎರಡಕ್ಕರವಾಗಿದ್ದು ಆ ಎರಡೂ ಹ್ರಸ್ವಾಕ್ಷರವಾಗಿದ್ದರೆ ಆಗ ಅದು (ಅಂದರೆ ಎರಡನೆ ಕ್ರಿಯಾಧಾತುವನ್ನು ಸೇರುವಮುನ್ನ) ಭೂತಕಾಲ ಪ್ರತ್ಯವನ್ನಾಗಲಿ ಅಥವಾ ಭೂತನ್ಯೂನರೂಪ ಪದವನ್ನಾಗಲಿ ಹೊಂದುವುದು ಸಾಮಾನ್ಯ ಪ್ರಕ್ರಿಯೆಯಾಗಿದೆ.

**(ಶಿಷ್ಟಭಾಷೆ – ಶಿ.ಭಾ. ಬಾದಾಮಿ ಆಡು ಭಾಷೆ –ಬಾ.ಆ.ಬಾ.) ಕೊಳ್ಳು**

ಬರೆ+ದು+ಕೊಳ್ಳು> ಬರೆದುಕೊಳ್ಳು<ಬರೆದುಕೊ (ಶಿ.ಭಾ)< ಬರಕೊ/ಬರ್ಕೊ (ಬಾ.ಆ.ಬಾ.)

ಸುಲಿ+ದು+ಕೊಳ್ಳು> ಸುಲಿದುಕೊಳ್ಳು<ಸುಲಿದುಕೊ (ಶಿ.ಭಾ)< ಸುಲಕೊ/ಸುಲ್ಕೊ (ಬಾ.ಆ.ಬಾ.)

ಹರಿ+ದು+ಕೊಳ್ಳು> ಹರಿದುಕೊಳ್ಳು<ಹರಿದುಕೊ (ಶಿ.ಭಾ)< ಹರಿಕೊ/ಹರ್ಕೊ (ಬಾ.ಆ.ಬಾ.)

ಬಡಿ+ದು+ಕೊಳ್ಳು> ಬಡಿದುಕೊಳ್ಳು<ಬಡಿದುಕೊ (ಶಿ.ಭಾ)< ಬಡಕೊ/ಬಡ್ಕೊ (ಬಾ.ಆ.ಬಾ.)

**ಭೂ.ನ್ಯೂ.ರೂಪ + ಕೊಳ್ಳು**

ಸಿಗು<ಸಿಕ್ಕಿ+ಕೊಳ್ಳು > ಸಿಕ್ಕಿಕೊಳ್ಳು<ಸಿಕ್ಕಿಕೊ॰ (ಶಿ.ಭಾ.) < ಸಿಕ್ಕೊ (ಬಾ.ಆ.ಭಾ.)

ಕೊಡು<ಕೊಟ್ಟು+ಕೊಳ್ಳು > ಕೊಟ್ಟುಕೊಳ್ಳು<ಕೊಟಗೊಳ್ಳು (ಶಿ.ಭಾ.) < ಕೊಟಗೊ (ಬಾ.ಆ.ಭಾ.)

ಇಡು<ಇಟ್ಟು+ಕೊಳ್ಳು > ಇಟ್ಟುಕೊಳ್ಳು<ಇಟಗೊಳ್ಳು (ಶಿ.ಭಾ.) < ಇಟಗೊ/ಇಟ್ಗೊ (ಬಾ.ಆ.ಭಾ.)

ಸುಡು<ಸುಟ್ಟು+ಕೊಳ್ಳು > ಸುಟ್ಟುಕೊಳ್ಳು<ಸುಟಗೊಳ್ಳು (ಶಿ.ಭಾ.) < ಸುಟಗೊ/ಸುಟ್ಗೊ (ಬಾ.ಆ.ಭಾ.)

**ಮೊದಲ ಕ್ರಿಯಾಧಾತುವಿನ ಮೊದಲಕ್ಕರ ದೀರ್ಘವಾದಾಗ –**

ನೋಡು+ಕೊಳ್ಳು> ನೋಡಿಕೊಳ್ಳು< ನೋಡಿಕೊ (ಶಿ.ಭಾ.) ನೋಡಕೊ/ನೋಡ್ಕೊ (ಬಾ.ಆ.ಭಾ.)

ಬೇಡು+ಕೊಳ್ಳು> ಬೇಡಿಕೊಳ್ಳು< ಬೇಡಿಕೊ (ಶಿ.ಭಾ.) ಬೇಡಕೊ/ಬೇಡ್ಕೊ (ಬಾ.ಆ.ಭಾ.)

ಕೂಡು+ಕೊಳ್ಳು> ಕೂಡಿಕೊಳ್ಳು< ಕೂಡಿಕೊ (ಶಿ.ಭಾ.) ಕೂಡಕೊ/ಕೂಡ್ಕೊ (ಬಾ.ಆ.ಭಾ.)

ಹಾಕು+ಕೊಳ್ಳು> ಹಾಕಿಕೊಳ್ಳು< ಹಾಕಿಕೊ (ಶಿ.ಭಾ.) ಹಾಕ್ಕೊ/ಹಕ್ಕೊ (ಬಾ.ಆ.ಭಾ.)

ಬೀಳು<ಬಿದ್ದು+ಕೊಳ್ಳು ಬಿದ್ದುಕೊಳ್ಳು< ಬಿದ್ದುಕೊ (ಶಿ.ಭಾ.) ಬಿದಕೊ/ಬಿದ್ಕೊ (ಬಾ.ಆ.ಭಾ.) (ಇಲ್ಲಿ ಮಾತ್ರ ಕ್ರಿಯಾಧಾತು ಭೂತ ನ್ಯೂನರೂಪ ಪಡೆದಿದೆ)

ಇದೇ ರೀತಿ ಇತರ ರೂಪಗಳು–

ಎತ್ತು–ಎತ್ತಿಕೊಳ್ಳು <ಎತ್ತಿಕೊ (ಶಿ.ಭಾ.) < ಎತಗೊ/ಎತ್ಕೊ (ಬಾ.ಆ.ಭಾ.)

ಮುಚ್ಚು – ಮುಚ್ಚಿಕೊಳ್ಳು < ಮುಚ್ಚಿಕೊ (ಶಿ.ಭಾ.) ಮುಚಗೊ/ಮುಚ್ಗೊ (ಬಾ.ಆ.ಭಾ.)

ಮಲಗು – ಮಲಗಿಕೊಳ್ಳು < ಮಲಗಿಕೊ (ಶಿ.ಭಾ.) ಮಲಕೊ/ಮಕ್ಗೊ (ಬಾ.ಆ.ಭಾ.)

ತೆವಳು – ತೆವಳಿಕೊಳ್ಳು < ತೆವಳಿಕೊ (ಶಿ.ಭಾ.) ತೆವಳಕೊ/ತೆವಳ್ಗೊ (ಬಾ.ಆ.ಭಾ.)

**ಬಿಡು**

ಬರು–ಬಂದಬಿಡು, ತಿನ್ನು –ತಿಂದಬಿಡು,. ಹಾಕು –ಹಾಕಿಬಿಡು, ಕೊಡು – ಕೊಟ್ಟುಬಿಡು

ನೋಡು – ನೋಡಿಬಿಡು, ಹೋಗು – ಹೋಗಿಬಿಡು, ಮುಚ್ಚು – ಮುಚ್ಚಿಬಿಡು

ಹತ್ತು – ಹತ್ತಿಬಿಡು, ಎತ್ತು – ಎತ್ತಿಬಿಡು, ಕಚ್ಚು–ಕಚ್ಚಿಬಿಡು, ಹಚ್ಚು–ಹಚ್ಚಿಬಿಡು

ಮಾರು – ಮಾರಿಬಿಡು, ಬಿಡು –ಬಿಟ್ಟಬಿಡು, ಕೊಡು – ಕೊಟ್ಟಬಿಡು

ಕಟ್ಟು – ಕಟ್ಟಿಬಿಡು, ಹೊದೆ–ಹೊಚ್ಚಿಬಿಡು, ಸುರುವು – ಸುರುವಿಬಿಡು

ಸಿಗು – ಸಿಕ್ಕಬಿಡು, ಬೀಳು–ಬಿದ್ದಬಿಡು, ದಬ್ಬು–ದಬ್ಬಿಬಿಡು, ಆಗು–ಆಗಿಬಿಡು

**ಆಡು**

ಸುತ್ತು–ಸತ್ಯಾಡು, ಹೊಯ್–ಹೊಯ್ದಾಡು / ಹೋದಾಡು, ಕೂಡು–ಕೂಡ್ಯಾಡು

ಹಾಡು–ಹಾಡ್ಯಾಡು, ಜಗಿ(ದು)–ಜಗಿದ್ಯಾಡು, ಎತ್ತು –ಎತ್ತ್ಯಾಡು, ಒಗೆ(ದು) ಒಗದ್ಯಾಡು / ವಗದ್ಯಾಡು ಓಡು–ಓಡ್ಯಾಡು, ಹಾಕು–ಹಾಕ್ಯಾಡು, ಎಳೆ(ದ) ಎಳೆದ್ಯಾಡು ಹೊಡೆ(ದು)–ಹೊಡೆದ್ಯಾಡು.

ಗುದ್ದು–ಗುದ್ದ್ಯಾಡು, ಮಿಸುಗು – ಮಿಸಿಗ್ಯಾಡು

**ಆಗು**

ಮಾತಾಗು, ಸುತ್ತಾಗು, ಸುಸ್ತಾಗು, ಹೊತ್ತಾಗು, ಮಂಕಾಗು, ಸಾಕಾಗು, ಬೇಕಾಗು, ಬ್ಯಾಡಾಗು

ಒಂದಾಗು ಎರಡಾಗು, ಹೋಳಾಗು, ಮೇಳಾಗು, ಹಾಳಾಗು, ಮುದ್ದ್ಯಾಗು, ನುಗ್ಗಾಗು, ಗಂಟಾಗು

**ಬೀಳು**

ಅಡ್ಡಬೀಳು, ಗಂಟಬೀಳು, ಹತ್ತಿಬೀಳು, < ಹತ್ತಿಬೀಳು, ಸಿಕ್ಕುಬೀಳು < ಸಿಗಬೀಳು

ಹೋಗು–ಹೊಗಬೀಳು / ಹೋಗಿಬೀಳು, ಹೊರ(ಗೆ)–ಹೊರಬೀಳು

**ಹಾಕು**

ಗೀಟ್ಹಾಕು , ಕಾಟ್ಹಾಕು, ಮುಸಕ್ಹಾಕು. ಹೊತ್ಹಾಕು. ಸುತ್ಹ್ಹಾಕು. ಎತ್ಹ್ಹಾಕು.

ಬಹುತೇಕವಾಗಿ ಇವೆಲ್ಲವೂ ಆಡುಭಾಷಾ ರೂಪಗಳು.

ಕೂಡು ಪದಗಳು ಮತ್ತು ಸಮಸ್ತಪದಗಳು

**ಕೂಡುಪದಗಳು ಮತ್ತು ಸಮಸ್ತಪದಗಳು**

ಈ ಎರಡೂ ಪದ ಪ್ರಕಾರಗಳಲ್ಲಿ ಕೆಲವು ಸಾಮ್ಯತೆಯ ಲಕ್ಷಣಗಳು ಕಾಣಿಸುತ್ತವೆ.

೧. ಎರಡರಲ್ಲೂ ಸಾಮಾನ್ಯವಾಗಿ ಎರಡೆರಡೆ ಎಂದು ಗುರ್ತಿಸುವ ಅಂಗಪದಗಳಷ್ಟೆ ಭಾಗಿಗಳಾಗುತ್ತವೆ.

೨. ಎರಡು ಪದಗಳು ಕೂಡಿಕೊಂಡು ಏಕಪದ ಸೃಷ್ಟಿಗೊಳ್ಳುತ್ತದೆ.

೩. ಈ ಏಕಪದದ ನಡುವೆ ಯಾವುದೇ ರೂಪವನ್ನು ತುರುಕಲು ಸಾಧ್ಯವಾಗದು.

೪. ಮತ್ತು ಈ ಏಕಪದವು ಇತರ ಸಮಸ್ತಪದಗಳ ಹಾಗೆ ವಿಭಿನ್ನ ಅರ್ಥದ ಆಶಯವನ್ನೆ ಹೊತ್ತು ಕೊಂಡಿರುತ್ತವೆ.

೫. ಇದು ಕೂಡುಪದಗಳಿಗೆ ಅನ್ವಯಿಸಿದ ಮಾತು–
ವಿಭಿನ್ನ ಕ್ರಿಯಾರ್ಥದ ಆಶಯವನ್ನೆ ಹೊತ್ತ ಕೆಲವೇ ಕೆಲವು ಕೂಡುಪದಗಳು ಮಾತ್ರ ಗಮನ ಸೆಳೆಯುವಂಥವು ಇವೆ ಇಲ್ಲಿ. ಎರಡನೇ ಭಾಗವಾಗಿ ಗುರುತಿಸಲಾಗುವ ವಿಭಿನ್ನ ಕ್ರಿಯಾರ್ಥ ರೂಪದ ಸಮಸ್ತ ಪದಗಳು ಎನ್ನಬೇಕು.[೫]

**ಸಮಸ್ತಪದವಾಗಿವರ್ತಿಸುವ ಕೆಲವು ಕೂಡುಪದಗಳ ಪಟ್ಟಿಯನ್ನೇ ಇದೀಗ ಒಮ್ಮೆ ಪರಿಶೀಲಿಸೋಣ**

**೧. ಕ್ರಿಯಾಪದ + ಕ್ರಿಯಾಪದ> ಭಿನ್ನಾರ್ಥದ ಕ್ರಿಯಾಪದ**

ಬೇಡು<ಬೇಡಿಕೊಳ್ಳು<ಬೇಡಿಕೊ (ಶಿ.ಭಾ.) ಬೇಡಕೊ/ಬೇಡ್ಕೊ (ಆ.ಭಾ.)
= ದೀನ ಭಾವನೆಯಿಂದ ಅಥವಾ ಭಕ್ತಿಯಿಂದ ಯಾಚಿಸು, ಇಚ್ಛೆಯನ್ನು ಬಿಚ್ಚಿ ಹೇಳಿಕೊ

ನೋಡು <ನೋಡಿಕೊಳ್ಳು<ನೋಡಿಕೊ (ಶಿ.ಭಾ.) <ನೋಡಕೊ/ನೊಡ್ಕೊ (ಆ.ಭಾ.)
=ಕೆಲಸಕಾರ್ಯ ಸಮರ್ಥವಾಗಿ ನಿರ್ವಹಿಸು, ಉಸ್ತುವಾರಿ ವಹಿಸಿಕೊ
"ಈ ಮುಪ್ಪಿನ ಕಾಲಕ್ಕ ನಮ್ಮ ಮೊಮ್ಮಗ್ನ ಎಲ್ಲಾ ನೋಡ್ಕೊಂಡ್ ಹೊಕ್ಕಾನಾ"

ಹಚ್ಚು< ಹಚ್ಚಿಕೊಳ್ಳು< ಹಚ್ಚಿಕೊ< ಹಚಗೊ
=ಪ್ರೀತಿ, ಆತ್ಮೀಯತೆಯಿಂದ ಒಡನಾಡು
"ಎಲ್ಲಾರ್ನೂ ಹಚಗೊಂಡ ಹೊಕ್ಕಾನಾ"

ಬಡಿ<ಬಡಿದುಕೊಳ್<ಬಡಕೊ/ಬಡ್ಕೊ = ಪ್ರೀತಿ, ಕಾಳಜಿಯೊಂದಿಗೆ ಒತ್ತಾಯಿಸು. ತೀವ್ರವಾಗಿ ಹಂಲಿಸು
"ಹಾಂಗ ಮಾಡ್ಬ್ಯಾಡಾssಂತ ರಗಡ ಬಡ್ಕೊಂಡ್ಯಾ!"
"ಆಸಜ್ಜೀ ಬರದಾಗ ಜನಾ ಕೊಟ್ಟದ್ದನ್ನ ಬಡ್ಕೊಂಡ್ ಬಡ್ಕೊಂಡ ತಿಂದ್ರ"

ಮಾಡು<ಮಾಡಿಕೊಳ್ಳು<ಮಾಡಿಕೊ< ಮಾಡಕೊ/ಮಾಡ್ಕೊ = ಮದುವೆಯಾಗು

"ಬ್ಯಾಡ, ಬ್ಯಾಂಡಂದ್ರು ಹ್ಯಾಂವ ಮಾಡು ಅಕ್ಕನ ಮಗಳ್ನ ಮಾಡ್ಕೊಂಡಾ"

(ಹ್ಯಾಂವ = ದ್ವೇಷ)

ಇಡು<ಇಟ್ಟುಕೊಳ್ಳು<ಇಟ್ಟುಕೊ<ಇಟಗೊ/ಇಟ್ಗೊ = ಮದುವೆ ಆಗದೆ ಒಬ್ಬಳ ಸಂಬಂಧ ಹೊಂದಿರು

"ಲಗ್ಗಣ ಆಗದ ಇಬ್ಬರ್ರೂ ಇಟ್ಗೊಂಡಾನಾ!"

"ಕಟ್ಗೊಂಡಾಕಿ ಕಡೇತನಕ, ಇಟಗೊಂಡಾಕಿ ಇರೋತನಕಾ" (ಈಭಾಗದ ಗಾದೆ ಮಾತು)

ಹಾಕು+ಆಡು> ಹಾಕಾಡು< ಹಾಕ್ಯಾಡು (ಆ.ಭಾ,) ಜಗಳಾಟು, ಕ್ಯಾತೆತೆಗೆ

"ಸಿಳ್ಳಿ,ಮಿಳ್ಳಿ ಕಾರಣಕ್ಕೆ ಗಂಡಾ ಹೇಂತಿ ಹೊತ್ತಹೊಂಟ್ರ ಹಾಕ್ಯಾಡುದ ಹಾಕ್ಯಾಡೂದು!"

ಗುದ್ದು+ಆಡು> ಗುದ್ದಾಡು< ಗುದ್ದ್ಯಾಡು < ಜಗಳಾಡು / ಪ್ರಯತ್ನಪಡು

೧. "ಅವನ ನೌಕ್ರಿ ಸಮಂದ ರಗsಡ ಗುದ್ದ್ಯಾಡಿದ್ವಿ" (=ಪ್ರಯತ್ನಪಡು)

೨. "ಆಸ್ತಿ ಸಮಂದ ಅಣ್ಣಾತಮ್ಮಾ ಗುದ್ದ್ಯಾಡಾಕ (> ಗುಡ್ದ್ಯಾಡುವುದಕ್ಕೆ) ಹತ್ತ್ಯಾರಾ)"(=ಜಗಳಾಡು)

ಬೀಳು+ಕೊಡು > ಬೀಳ್ಕೊಡು = ಪ್ರೀತಿಯಿಂದ ಕುಳುಹಿಕೊಡು, ವಿದಾಯ ಹೇಳು

"ಬಂಧು-ಬಳಗದವರನ್ನು ಬೀಳ್ಕೊಟ್ಟು ಇದೀಗ ತಾನೆ ಬಂದರು" **ಶಿಷ್ಟಭಾಷಾ ಪ್ರಯೋಗ**

"ಬಂದಂತಹ ಅತಿಥಿಗಳನ್ನು ಹಾರ್ದಿಕವಾಗಿ ಬೀಳ್ಕೊಡಲಾಯಿತು" **ಶಿಷ್ಟಭಾಷಾ ಪ್ರಯೋಗ**

ಹಾರು<ಹಾರಿ+ಆಡು < ಹಾರಾಡು<ಹಾರ್ಯಾಡು ತೇಲಾಡು

ಹಣಬಲ, ತೋಳ್‌ಬಲದ ಪೊಗರು ತೋರು

೧. "(ಗಾಳಿ)ಪಟಾ ಗಾಳ್ಯಾಗ ಹಾರ್ಯಾಡಾಕ ಹತ್ತೇತಿ, ಕಣ್ಬಿಟ್ಟ ನೋಡಲಾ!" (=ತೇಲಾಡು)

೨. "ಅಂವಾ ಎಷ್ಟ ಹಾರ್ಯಾಡಿದ್ರುನು ಈ ಸಾರಿ ಮಣ್ಮುಕ್ಕೂದು ಕರೆ!" (ಪೊಗರು ತೋರು)

(ಮಣ್ಣು+ಮುಕ್ಕು ಮಣ್ಮುಕ್ಕು=ಸೋಲು, ಖರೆ<ಕರೆ = ನಿಜ, ಸತ್ಯ

ಎತ್ತು<ಎತ್ತಿ+ಹಾಕು> ಎತ್ತಿಹಾಕು < ವಾಚ್ಯಾರ್ಥ(=ಎತ್ತಿಇಡು) / ನುಂಗಿಹಾಕು, ಲಪಟಾಯಿಸು

೧. "ಆ ಶಗಣಿನೆಲ್ಲಾ ಶಗಣಿ ಪುಟ್ಟ್ಯಾಗ ಎತ್ತಿಹಾಕು"

೨. "ಈಗಿನ ರಾಜಕೀ ಮಂದೀಗೆ ಎತ್ತಿ ಹಾಕೂದು ಒಂದ್‌ಕಾಯ್ಕ ಆಗಿಬಿಟ್ಟೇತ್ರಿ!"

(ಕಾಯಕ <ಕಾಯ್ಕ)

ನಾಮಪದ+ಕ್ರಿಯಾಪದ >ಭಿನ್ನಾರ್ಥದ ಕ್ರಿಯಾಪದ

ಅಡ್ಡ+ಆಗು>ಅಡ್ಡಾಗು = ಕಿರುನಿದ್ರೆಗೆ ಜಾರು (ಆಡು ಭಾಷೆ)

"ಹೈರಾಣಾಗಿ ಈಗ ಅಡ್ಡಾಗಿದ್ದ್ಯಾ, ಅಸ್ವರಾಗ ನೀ ಬಂದಿ"

ಮಾತು+ಆಗು> ಮಾತಾಗು = ವಚನಕೊಡು, ಪ್ರಮಾಣ ಮಾಡು (ಆ.ಭಾ+ಶಿ.ಭಾ)

"ಇಬ್ಬರ ನಡಕ ಕೊಡ-ತೊಗೊಳ್ಳುದ್ರಾಗ ಮಾತಾಗೇತಿ"

ಗೋಳು + ಆಡು > ಗೋಳಾಡು (ಆ. ನುಡಿ) = ಕಣ್ಣೀರುಗರೆ, ನಿಟ್ಟುಸಿರು ಬಿಡು.

"ಒಡಹುಟ್ಟಿದ ತಮ್ಮನ ಕೈಕೊಟ್ಟ, ಹಿಂಗಾಗಿ ತಮ್ಮನ ಹೆಸರನ್ಯಾಗ ಗೋಳಾಡ್ತಾನಾ"

– ಮೆಟ್ಟು + ಆಗು > ಮೆಟ್ಟಾಗು (ಆ. ಭಾ) = ನೆಲೆಯೂರು, ಆಸರೆ ಪಡೆ.

"ಈ ಹೇಂತಿ ಊರಿಗೆ ಹೋಗಿ ಅಲ್ಲೆ ಮೆಟ್ಟಾಗ್ಯಾನಾ"

– ಕಟ್ಟು + ಆಗು > ಕಟ್ಟಾಗು (ಆ. ಭಾ) = ಶಕ್ತಿಗುಂದು, ಎದ್ದು ತಿರುಗಾಡದಂತಾಗು.

"ರಗಡ ಉರದಾಡ್ತಾ ಇದ್ದಾ ಆದ್ರ ಈಗ ಒಂದ್ ತಿಂಗಳಾತು ಕಟ್ಟಾಗ್ಯಾನಾ !"

– ಗಂಟು + ಬೀಳು > ಗಂಟಬೀಳು (ದಾರ ಗಂಟು, ಗಂಟಾಗು (ಆ.ಭಾ)

ನಿರಂತರವಾಗಿ ಬೆನ್ನು ಹತ್ತು, ದುಂಬಾಲು ಬೀಳು

(ಶಿಷ್ಟ ಭಾಷಾ ಪ್ರಯೋಗ)

೧. "ತಲಾಟಿಗೆ ಗಂಟ ಬಿದ್ದಾದ್ರು ಹೋದ ಕೆಲಸಾ ಮುಗಿಸಿಬಿಡಬೇಕಾಗೇತಿ"

೨. "ಖುದ್ದಾಗಿ ಗಂಟ ಬೀಳದ ನಮ್ಮ ಕೆಲಸ ಕಾರ್ಯ ಕೈಗೂಡದು"

– ಅಡ್ಡ + ಬೀಳು > ಅಡ್ಡಬೀಳು = ಸಾಷ್ಟಾಂಗ ನಮಸ್ಕಾರ ಮಾಡು

ಇಡೀ ದೇಹವನ್ನು ಚೆಲ್ಲಿಕೊಂಡು ನಮಸ್ಕರಿಸು

"ಅಡ್ಡ ಬಿದ್ದೆ ಬುದ್ಧಿ" – (ಶಿ.ಭಾ. ಪ್ರಯೋಗ)

– ಬಾಯಿ + ಬಿಡು > ಬಾಯ್ಬಿಡು (ಆ.ಭಾ) = ನಿಜ ಹೇಳು. ಗುಟ್ಟು ರಟ್ಟು ಮಾಡು.

"ಹಣ್ಣಗಾಯಿ ನೀರಗಾಯಿ ಆಗೂವಾಂಗ ನಾಲ್ಕವದ್ದಾಗ ಅಂವಾ ಬಾಯ್ಬಿಟ್ಟಾ !"

– ಮೇಳ + ಕೂಡು > ಮೇಳಗೂಡು = ಜೊತೆಗೂಡು (ಶಿ.ಭಾ)

"ಇಬ್ಬರು ಲಪುಟರು ಹೀಗಾಗಿ ಮೇಳಗೂಡೇತಿ !" (ಶಿ.ಭಾ. ಪ್ರಯೋಗ)

– ಹೊರ(ಗೆ) + ಬೀಳು > ಹೊರಬೀಳು = ಹೊರಹೊಮ್ಮು, ಪ್ರಕಟಗೊಳ್ಳು (ಶಿಷ್ಟ ಭಾಷೆ)

"ಲಪುಟ ಗಿರಿಯ ಸುದ್ದಿ ಹೊರ ಬೀಳುತ್ತಿದ್ದಂತೆ ಆ ಮಂತ್ರಿ ರಾಜೀನಾಮೆ ಕೊಟ್ನಂತ!"

(ಶಿಷ್ಟ ಭಾಷಾ ಪ್ರಯೋಗ)

**ಅಡಿ ಟಿಪ್ಪಣಿಗಳು**

೧. ಜಾನಪದ ವಿದ್ವಾಂಸರಾದ ಪ್ರೊ. ಹಿ.ಚಿ. ಬೋರಲಿಂಗಯ್ಯನವರ ಪತ್ರಿಕಾ ವರದಿಯಲ್ಲಿ (ವಿಜಯ ಕರ್ನಾಟಕ) ಪ್ರಕಟಗೊಂಡ ಅಭಿಪ್ರಾಯವಾಗಿದೆ.

೨. ಸದ್ಯ ನನ್ನ ಗಮನಕ್ಕೆ ಬಂದಿರುವ ಹಾಗೆ ಮತ್ತು ವಿಶಿಷ್ಟ ಒಳರಚನೆಯ ಸ್ವರೂಪದೊಂದಿಗೆ ಈ ವಿಶಿಷ್ಟ ಪದ ಪ್ರಕಾರಗಳು ಇಂತಿವೆ.

ಕನ್ನಡದ ವಿಶಿಷ್ಟ ಪದ ಪ್ರಕಾರಗಳು
- ೧. ಸಮಸ್ತ ಪದಗಳು
- ೨. ಜೋಡು ನುಡಿಗಳು
- ೩. ಪ್ರತಿಧ್ವನಿ ಪದಗಳು
- ೪. ಕೂಡು ಪದಗಳು – ಇವುಗಳ ವಿಶ್ಲೇಷಣೆಯೇ ಇಲ್ಲಿದೆ
- ೫. ನುಡಿಗಟ್ಟುಗಳು

೩. ಈ ಕ್ರಿಯಾಪದಗಳೆರಡು ಹದವರಿತು ಸೇರಿಕೊಂಡು ಬಳಕೆಯಾದಾಗ ಇವುಗಳೆ ಕೂಡುಪದಗಳೆನಿಸಿಕೊಳ್ಳುತ್ತವೆ. ಇವುಗಳನ್ನೆ ಈ ಹಿಂದೆ ಸಂಯುಕ್ತ ಕ್ರಿಯಾಪದಗಳೆಂದು ಗುರುತಿಸಲಾಗುತ್ತಿತ್ತು. ಇವನ್ನೆ ಮತ್ತಷ್ಟು ವ್ಯವಸ್ಥಿತವಾಗಿ ಗುರುತಿಸಿ ಒಂದು ಶಿಸ್ತಿನ ಲಕ್ಷಣದ ವಿವರಣೆಯೊಂದಿಗೆ ವಿಶ್ಲೇಷಿಸಿದವರು ಡಿ.ಎನ್.ಎಸ್. ಭಟ್ ಅವರು ಎಂದೇ ಹೇಳಬೇಕು. ಇನ್ನು ಅದಕ್ಕೊಂದು 'ಕೂಡುಪದ'ವೆಂಬ ಪರಿಭಾಷೆಯೊಂದಿಗೆ ಕನ್ನಡ ವ್ಯಾಕರಣದಲ್ಲಿ ಸ್ಥಿರೀಕರಣಗೊಳಿಸಿದವರು.

ನೋಡಿ – ಗ್ರಂಥ : 'ಕನ್ನಡ ಪದ ರಚನೆ' ಎ ಆವೃತ್ತಿ ೨೦೦೨ ಪುಟ – ೧೭೯

೪. ಇಲ್ಲೇನೊ 'ಸಿಕ್ಕಿಕೊಳ್ಳು' ಎಂಬ ಕೂಡುಪದವಿದೆ. ಆದರೆ ಇದೆ ಸಂದರ್ಭದಲ್ಲಿ ಸಿಕ್ಕಿಹಾಕಿಕೊಳ್ಳು< <ಸಿಕ್ಕಿಹಾಕಿಕೊ<ಸಿಕ್ಹಾಕೊ (ಭಾ.ಆ.ಭಾ) ಎಂಬ ರೂಪವೊಂದು ಈ ಪರಿಸರದಲ್ಲಿ ಬಳಕೆ ಇದೆ. ವಾಸ್ತವವಾಗಿ ಈ ರೂಪ ಕೂಡು ಪದಗಳಲ್ಲಿ ಅಪವಾದ ಎನ್ನಬಹುದೆ ? ಮೂರು ಕ್ರಿಯಾಪದಗಳು ಸೇರಿವೆ. [ಸಿಗು < ಸಿಕ್ಕ (ಸಿಕ್ಕಿ) (ಭೂ.ನ್ಯೂ. ರೂಪ) + ಹಾಕು + ಕೊಳ್ಳು]

– ಎರಡೇ ಕ್ರಿಯಾಧಾತುಗಳ ಕೂಡುಪದ – ಹಾಕಿ ಕೊಳ್ಳು < ಹಾಕಿ ಕೊ< ಹಾಕ್ಕೊ/ ಹಕ್ಕೊ (ಬಾ ಆ ಭಾ) = ಧರಿಸು, ತೊಟ್ಟುಕೊ

ಉದಾ "ಚಪಲ್ನ ಹಕ್ಕೊ" – ಆದೇಶ ಸ್ವರೂಪದ ವಾಕ್ಯ

(ಚಪ್ಪಲಿಯನ್ನು ಹಾಕಿಕೊ)

– ಮೂರು ಕ್ರಿಯಾಧಾತುಗಳ ಕೂಡುಪದ – ಸಿಕ್ಹಾಕ್ಕೊ / ಸಿಕಾಕ್ಕೊ = ಸಿಕ್ಕಿಬೀಳು,

ಬಂಧನಕ್ಕೆ ಒಳಗಾಗು. ಉದಾ "ಮಾಡಬಾರದನ್ನ ಮಾಡಿ ಕೊನಿಗಿ ಸಿಕ್ಹಾಕ್ಕೊಂಡು ಈಗ ಪರಿತಾಪಪಡಾಕಹತ್ತ್ಯಾನಾ!" (ಊಹಿಸಲಾಗದ ಅಸಹ್ಯಕರ ಹೊಲಸ ವ್ಯವಹಾರ ಮಾಡಿ ಅಂತಿಮವಾಗಿ ಬಂಧನಕ್ಕೆ ಒಳಗಾಗಿ ತನ್ನ ಕಾರ್ಯ ವಿಧಾನದ ಬಗ್ಗೆ ತಾನೆ ಒಳ ಸಂಕಟ ಅನುಭವಿಸುತ್ತಿದ್ದಾನೆ)

ಇದೇ ಇತರ ರೂಪಗಳು –= ನೋಡಕೊಂಡಬಿಡು, ಹಚಗೊಂಡಬಿಡು, ಮುಚ್ಚಿಹಾಕಿಬಿಡು < ಮುಚ್ಚ್ಹಾಕಿಬಿಡು ಮಾಡಿಕೊಂಡಬಿಡು, ಎತ್ತಿಹಾಕಿಬಿಡು

೫. (i) ಸಮಸ್ತ ಪದಗಳಿಗೆ ಸಂಬಂಧಿಸಿದಂತೆ ಕನ್ನಡದ ಅಸ್ಮಿತೆಯನ್ನು ಗುರುತಿಸಿಕೊಳ್ಳುವಾಗ ಭಟ್ಟರು ಈಗಾಗಲೆ ಮೂರು ಪ್ರಕಾರದ ಪದಗಳಿವೆ ಎಂದು ಹೇಳಿದ್ದಾರೆ. ಅವೆಲ್ಲಾ ನಾಮಪದಗಳಾಗಿವೆ. ಅದರೊಂದಿಗೆ ವಿಭಿನ್ನಾರ್ಥದ ಕ್ರಿಯಾಪದಗಳಾಗಿ ತಯಾರಾಗುವ ಇನ್ನೆರಡು ಸಮಸ್ತ ಪದಗಳನ್ನು ಇಲ್ಲಿಯೇ ಜೊತೆಗೂಡಿಸಿ ವಿವರಿಸುವುದು ಇದೀಗ ಉಚಿತವಾಗಿಯೆ ತೋರುತ್ತದೆ.

ಕನ್ನಡದ ಸಮಗ್ರ ಸಮಸ್ತ ಪದಗಳನ್ನು ರೇಖಾಚಿತ್ರದ ಮೂಲಕ ಈ ರೀತಿ ಗುರುತು ಹಾಕಿಕೊಳ್ಳಬೇಕಾಗುತ್ತದೆ.

**ಕನ್ನಡದ ಸಮಸ್ತಪದಗಳು**




(ii) ಸಮಾಸರಚನಾ ಬಂಧದ ಒಂದು ಸ್ಪಷ್ಟ ಪರಿಕಲ್ಪನೆಯಾಗಿ ವಿವರಿಸಲಾಗಿರುವ ಚಿಂತನಾಂಶಗಳನ್ನು ಉಚಿತ ರೀತಿ ಇಲ್ಲಿ ಬಳಸಿಕೊಂಡಿರುವೆನು.

ಗ್ರಂಥ : ವರಸೆಗಳು

ಲೇಖನ : ಗಮಕ ಸಮಾಸವು ಸಮಾಸವೇ?

೬. ಈಗಿನ ವಿಜಾಪುರ ಜಿಲ್ಲೆಯ ಕೆಲ ಭಾಗಗಳಲ್ಲಿ (ಮುದ್ದೆ ಬಿಹಾಳ ಮತ್ತಿತರ ಎಡೆಗಳಲ್ಲಿ) 'ಗಂಟುಬೀಳು' ಎಂಬುದು 'ಕಾಣು', ಭೆಟ್ಟಿಯಾಗು' –ಎಂಬ ಒಳನುಡಿಯ ಅರ್ಥದೊಂದಿಗೆ ಬಳಕೆ ಇರುವುದು ಒಂದು ವಿಶೇಷ.

■

'ಕರ್ನಾಟಕ ಲೋಚನ' ಒಂದು ವಿದ್ವತ್ ಪತ್ರಿಕೆ. ಮುಖ್ಯವಾಗಿ ಸಂಶೋಧನೆ, ಪ್ರಾಚೀನ ಕನ್ನಡ ಸಾಹಿತ್ಯ, ಸಂಸ್ಕೃತಿ ವಿವೇಚನೆಗೆ ಮೀಸಲಾಗಿದೆ. ಕನ್ನಡ ನಾಡಿನ ಹಿರಿಯ-ಕಿರಿಯ ಸಾಹಿತ್ಯ ಚಿಂತಕರ ಮೂಲ ಆಶಯಕ್ಕೆ ಧಕ್ಕೆ ಬಾರದ ಹಾಗೆ ಉಪಯುಕ್ತ ಲೇಖನಗಳನ್ನು ಬರೆದುಕೊಡುವುದರ ಮೂಲಕ ಪತ್ರಿಕೆ ನಡೆಯುತ್ತಿದೆ. ಸಮಗ್ರ ಕನ್ನಡ ಸಾಹಿತ್ಯದ ಸಂವರ್ಧನೆಗೆ ಸಹಾಯಕವಾದ 'ಲೋಚನ' ಸಂಶೋಧನೆ, ಸಂಸ್ಕೃತಿ ಆಸಕ್ತರಿಗೆ ಉಪಯುಕ್ತವಾಗಿದೆ. ಇದರ ಉಪಯೋಗವನ್ನು ಕನ್ನಡ ಸಹೃದಯರು ಬಳಸಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಡಾ॥ ಪಿ.ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ